# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಗುರುವಾರ, ಜುಲೈ ೨೧, ೨೦೧೧ (ಆಷಾಢ ೩೦, ಶಕ ವರ್ಷ ೧೯೩೩) | ನಂ. ೬೮೫ |
|---|---|---|


## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ.

### ಅಧಿಸೂಚನೆ

**ನಂ. ಇಎಲ್‌ಎನ್(ಎಪಿಎಂಸಿ)ಸಿಆರ್/12/2011–12, ದಿನಾಂಕ : 21/07/2011**

ಕೋಲಾರ ಜಿಲ್ಲೆಯ **ಬಂಗಾರಪೇಟೆ ತಾಲ್ಲೂಕು** ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಚುನಾವಣೆಯನ್ನು ನಡೆಸಲು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ನಿಯಮಾವಳಿ 1968 ರ ನಿಯಮ 7 ರ ಪ್ರಕಾರ ದಿನಾಂಕ : 25/06/2011 ರಂದು ಚುನಾವಣಾ ತಿಳುವಳಿಕೆಯನ್ನು ನೀಡಲಾಗಿದ್ದು, ಅದರಂತೆ ದಿನಾಂಕ : 17/7/2011 ರಂದು ಚುನಾವಣೆಯನ್ನು ನಡೆಸಿ ಚುನಾವಣಾ ಫಲಿತಾಂಶವನ್ನು ಸಂಬಂಧಪಟ್ಟ ಚುನಾವಣಾಧಿಕಾರಿಗಳು ದಿನಾಂಕ : 19/7/2011 ರಂದು ಘೋಷಿಸಿರುತ್ತಾರೆ.

ಆದುದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966 ರ ಪ್ರಕರಣ 27 ರ ಪ್ರಕಾರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮನೋಜ್ ಕುಮಾರ್ ಮೀನ, ಭಾ.ಆ.ಸೇ., ಜಿಲ್ಲಾಧಿಕಾರಿ, ಕೋಲಾರ ಜಿಲ್ಲೆ, ಕೋಲಾರ ಆದ ನಾನು **ಬಂಗಾರಪೇಟೆ ತಾಲ್ಲೂಕು** ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ವಿವಿಧ ಕ್ಷೇತ್ರಗಳಿಂದ ಚುನಾಯಿತರಾದ ಸದಸ್ಯರುಗಳ ಹೆಸರುಗಳನ್ನು ಈ ಕೆಳಗೆ ನಮೂದಿಸಿದಂತೆ ಅಧಿಸೂಚಿಸಿದ್ದೇನೆ.

| ಕ್ರ. ಸಂ. | ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಚುನಾಯಿತರಾದ ಅಭ್ಯರ್ಥಿಯ ಹೆಸರು | ವಿಳಾಸ | ಮೀಸಲಾತಿ ವರ್ಗ | ವಯಸ್ಸು | ಜಾತಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | 1–ಸೂಲಿಕುಂಟೆ | ಎಂ.ಅಶ್ವಥ್ | ಬಿನ್ ಮುನಿಯಪ್ಪ, ಕಾರಮಂಗಲ (ಗ್ರಾ) & (ಅಂ) ಬಂಗಾರಪೇಟೆ (ತಾ) | ಹಿಂದುಳಿದ ವರ್ಗ"ಅ" | 37 | ಕುರುಬ |
| 2 | 2–ಹುಣಸನಹಳ್ಳಿ | ತಿಮ್ಮರಾಯನಾಯ್ಕ | ಬಿನ್ ವೆಂಕಟನಾಯ್ಕ, ಉಕ್ಕುಂದ (ಗ್ರಾ) ಬೂದಿಕೋಟೆ (ಅಂ) ಬಂಗಾರಪೇಟೆ (ತಾ) | ಪರಿಶಿಷ್ಟ ಪಂಗಡ | 60 | ಪ.ಜಾತಿ |
| 3 | 3–ದೊಡ್ಡೂರು ಕರಪನಹಳ್ಳಿ | ಬಿ.ವಿ.ಮಹೇಶ್ | ಬಿನ್ ಬಿ.ಪಿ.ವೆಂಕಟಮುನಿಯಪ್ಪ, ದೇಶಿಹಳ್ಳಿ (ಗ್ರಾ) &(ಅಂ) ಬಂಗಾರಪೇಟೆ (ತಾ) | ಪರಿಶಿಷ್ಟ ಜಾತಿ | 31 | ಪ.ಜಾತಿ |
| 4 | 4–ಘಟ್ಟಕಾಮದೇನಹಳ್ಳಿ | ಅಮರನಾರಾಯಣರೆಡ್ಡಿ | ಬಿನ್ ನಾರಾಯಣರೆಡ್ಡಿ ಪೊಟ್ಟೇಪಲ್ಲಿ (ಗ್ರಾ) ಪಾರಾಂಡಹಳ್ಳಿ (ಅಂ) ಬಂಗಾರಪೇಟೆ (ತಾ) | ಸಾಮಾನ್ಯ | 47 | ರೆಡ್ಡಿ |
| 5 | 5–ಬೇತಮಂಗಲ | ಎನ್.ಆರ್.ವಿಜಯ ಶಂಕರ್ | ಬಿನ್ ರಾಮಪ್ಪ ನಲ್ಲೂರು (ಗ್ರಾ) ಬೇತಮಂಗಲ (ಅಂ) ಬಂಗಾರಪೇಟೆ (ತಾ) | ಸಾಮಾನ್ಯ | 50 | ವಕ್ಕಲಿಗ |
| 6 | 6–ಎನ್.ಜಿ.ಹುಲ್ಕೂರು | ಜಿ.ಎಸ್.ಶ್ರೀನಿವಾಸ | ಬಿನ್ ಸಂಜೀವಪ್ಪ ಸೀತಂಪಲ್ಲಿ (ಗ್ರಾ) ಮುಷ್ಟೂರು (ಅಂ) ಬಂಗಾರಪೇಟೆ (ತಾ) | ಸಾಮಾನ್ಯ | 60 | ಗಾಣಿಗ |
| 7 | 7–ಕ್ಯಾಸಂಬಳ್ಳಿ | ಮಂಜುನಾಥರೆಡ್ಡಿ | ಬಿನ್ ಚಿನ್ನಮುನಿರೆಡ್ಡಿ ಬಿ.ಕೊತ್ತೂರು (ಗ್ರಾ) ಜಕ್ಕರಸನಕುಪ್ಪ (ಅಂ) ಬಂಗಾರಪೇಟೆ (ತಾ) | ಹಿಂದುಳಿದ ವರ್ಗ"ಬ" | 60 | ರೆಡ್ಡಿ |
| 8 | 8–ಮಾರಿಕುಪ್ಪ | ಆರ್.ದಶರಥರೆಡ್ಡಿ | ಬಿನ್ ಜೆ.ರಾಮಕೃಷ್ಣಾರೆಡ್ಡಿ ಎಂ.ಕೊತ್ತೂರು (ಗ್ರಾ) ಆಂಡ್ರಸನ್‌ಪೇಟೆ (ಅಂ) ಬಂಗಾರಪೇಟೆ (ತಾ) | ಸಾಮಾನ್ಯ | 37 | ರೆಡ್ಡಿ |

| ಕ್ರ. ಸಂ. | ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಚುನಾಯಿತರಾದ ಅಭ್ಯರ್ಥಿಯ ಹೆಸರು | ವಿಳಾಸ | ಮೀಸಲಾತಿ ವರ್ಗ | ವಯಸ್ಸು | ಜಾತಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 9 | 9–ಹುಲಿಬೆಲೆ | ಎಂ.ರಾಮಪ್ಪ | ಬಿನ್ ಕೆ.ಮುನಿಯಪ್ಪ, ಜ್ಯೋತೇನಹಳ್ಳಿ(ಗ್ರಾ) ಮಾಗೊಂದಿ(ಅಂ) ಬಂಗಾರಪೇಟೆ (ತಾ) | ಸಾಮಾನ್ಯ | 62 | ಒಕ್ಕಲಿಗ |
| 10 | 10–ಬೂದಿಕೋಟೆ | ಜಿ.ರಾಜಾರೆಡ್ಡಿ | ಬಿನ್ ವಿ.ಗುರುವಾರೆಡ್ಡಿ ದಿನ್ನಕೊತ್ತೂರು (ಗ್ರಾ) ಯಳೇಸಂದ್ರ (ಅಂ) ಬಂಗಾರಪೇಟೆ (ತಾ) | ಸಾಮಾನ್ಯ | 47 | ರೆಡ್ಡಿ |
| 11 | 11–ಕಾಮಸಮುದ್ರ | ಸಿ.ಲಕ್ಷ್ಮಿದೇವಿ | ಕೋಂ ಚನ್ನಾರೆಡ್ಡಿ ಚಾಮನಹಳ್ಳಿ (ಗ್ರಾ) ತೊಪ್ಪನಹಳ್ಳಿ (ಅಂ) ಬಂಗಾರಪೇಟೆ (ತಾ) | ಮಹಿಳೆ | 51 | ರೆಡ್ಡಿ |
| 12 | 12–ವರ್ತಕರ ಕ್ಷೇತ್ರ | ಜಿ.ಎಸ್.ಶಿವಶಂಕರ್ | ಬಿನ್ ಜಿ.ಕೆ.ಶಿವನಂಜಪ್ಪ, ಕರ್ನಾಟಕ ಟ್ರೇಡರ್ಸ್ 5ನೇಮುಖ್ಯರಸ್ತೆ, ಎಪಿಎಂಸಿ ಯಾರ್ಡ್, ಬಂಗಾರಪೇಟೆ | ಸಾಮಾನ್ಯ | 49 | ಲಿಂಗಾಯತ |
| 13 | 13–ಕೃಷಿ ಉತ್ಪನ್ನಗಳ ಮಾರಾಟ ಸಹಕಾರ ಸಂಘಗಳ ಕ್ಷೇತ್ರ | ಕೆ.ಸಿ.ಸೀತಾರಾಮಯ್ಯ | ಬಿನ್ ಚಿಕ್ಕಅಪ್ಪಯ್ಯ ಕೋಟರಾಮಗುಳ್ಳ(ಗ್ರಾ) ಯಳೇಸಂದ್ರ (ಅಂ) ಬಂಗಾರಪೇಟೆ (ತಾ) | ಸಾಮಾನ್ಯ | 52 | ಒಕ್ಕಲಿಗ |

**ಮನೋಜ್ ಕುಮಾರ್ ಮೀನ,**
ಜಿಲ್ಲಾಧಿಕಾರಿಗಳು,
ಕೋಲಾರ ಜಿಲ್ಲೆ, ಕೋಲಾರ.

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಗುರುವಾರ, ಜುಲೈ ೨೧, ೨೦೧೧ (ಆಷಾಢ ೩೦, ಶಕ ವರ್ಷ ೧೯೩೩) | ನಂ. ೬೮೬ |
|---|---|---|

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ.

## ಅಧಿಸೂಚನೆ

**ನಂ. ಇಎಲ್ಎನ್(ಎಪಿಎಂಸಿ)ಸಿಆರ್/12/2011–12, ದಿನಾಂಕ : 21/07/2011**

ಕೋಲಾರ ಜಿಲ್ಲೆಯ **ಮುಳಬಾಗಿಲು ತಾಲ್ಲೂಕು** ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಚುನಾವಣೆಯನ್ನು ನಡೆಸಲು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ನಿಯಮಾವಳಿ 1968 ರ ನಿಯಮ 7 ರ ಪ್ರಕಾರ ದಿನಾಂಕ : 25/06/2011 ರಂದು ಚುನಾವಣಾ ತಿಳುವಳಿಕೆಯನ್ನು ನೀಡಲಾಗಿದ್ದು, ಅದರಂತೆ ದಿನಾಂಕ : 17/7/2011 ರಂದು ಚುನಾವಣೆಯನ್ನು ನಡೆಸಿ ಚುನಾವಣಾ ಫಲಿತಾಂಶವನ್ನು ಸಂಬಂಧಪಟ್ಟ ಚುನಾವಣಾಧಿಕಾರಿಗಳು ದಿನಾಂಕ : 19/7/2011 ರಂದು ಘೋಷಿಸಿರುತ್ತಾರೆ.

ಆದುದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966 ರ ಪ್ರಕರಣ 27 ರ ಪ್ರಕಾರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮನೋಜ್ ಕುಮಾರ್ ಮೀನ, ಭಾ.ಆ.ಸೇ., ಜಿಲ್ಲಾಧಿಕಾರಿ, ಕೋಲಾರ ಜಿಲ್ಲೆ, ಕೋಲಾರ ಆದ ನಾನು **ಮುಳಬಾಗಿಲು ತಾಲ್ಲೂಕು** ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ವಿವಿಧ ಕ್ಷೇತ್ರಗಳಿಂದ ಚುನಾಯಿತರಾದ ಸದಸ್ಯರುಗಳ ಹೆಸರುಗಳನ್ನು ಈ ಕೆಳಗೆ ನಮೂದಿಸಿದಂತೆ ಅಧಿಸೂಚಿಸಿದ್ದೇನೆ.

| ಕ್ರ. ಸಂ. | ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಚುನಾಯಿತರಾದ ಅಭ್ಯರ್ಥಿಯ ಹೆಸರು | ವಿಳಾಸ | ಮೀಸಲಾತಿ ವರ್ಗ | ವಯಸ್ಸು | ಜಾತಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | 1. ಹೆಚ್.ಗೊಲ್ಲಹಳ್ಳಿ | ಕೆ.ಸತೀಶ್ | ಬಿನ್ ಬಿ.ಎಂ.ಕೃಷ್ಣಪ್ಪ, ನಂ.140 ಹೆಚ್.ಗೊಲ್ಲಹಳ್ಳಿ, ಮುಳಬಾಗಲು ತಾಲ್ಲೂಕು | ಸಾಮಾನ್ಯ | 43 ವರ್ಷ | ಒಕ್ಕಲಿಗ |

| ಕ್ರ ಸಂ. | ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಚುನಾಯಿತರಾದ ಅಭ್ಯರ್ಥಿಯ ಹೆಸರು | ವಿಳಾಸ | ಮೀಸಲಾತಿ ವರ್ಗ | ವಯಸ್ಸು | ಜಾತಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 2 | 2. ಮುಡಿಯನೂರು | ಎನ್.ಮಂಜುನಾಥ | ಬಿನ್ ನಾರಾಯಣಗೌಡ, ನಲ್ಲೂರು ಹನುಮನಹಳ್ಳಿ ಅಂಚೆ, ಮುಳಬಾಗಲು ತಾಲ್ಲೂಕು | ಸಾಮಾನ್ಯ | 36 ವರ್ಷ | ವಕ್ಕಲಿಗ |
| 3 | 3. ದೇವರಾಯಸಮುದ್ರ | ಎಸ್.ಮಂಗಮ್ಮ | ಬಿನ್ ಸೊಣ್ಣೇಗೌಡ, ಊರುಕುಂಟೆ ಮಿಟ್ಟೂರು, ಆವಣಿ ಹೋಬಳಿ, ಮುಳಬಾಗಲು ತಾಲ್ಲೂಕು | ಮಹಿಳೆ | 70 ವರ್ಷ | ವಕ್ಕಲಿಗ |
| 4 | 4. ಎಮ್ಮೇನತ್ತ | ರಾಮಪ್ಪ | ಬಿನ್ ರಂಗೆಪ್ಪ, ಸಾತನೂರು, ಮುಳಬಾಗಲು ತಾಲ್ಲೂಕು | ಪರಿಶಿಷ್ಟ ಪಂಗಡ | 60 ವರ್ಷ | ನಾಯಕ |
| 5 | 5. ವಿರೂಪಾಕ್ಷಿ | ಆರ್.ಕೃಷ್ಣಪ್ಪ | ಬಿನ್ ತಲಾರಿ ರಾಮಪ್ಪ, ಆವಣಿ, ಮುಳಬಾಗಲು ತಾಲ್ಲೂಕು | ಪರಿಶಿಷ್ಟ ಜಾತಿ | 63 ವರ್ಷ | ಆದಿ ಕರ್ನಾಟಕ |
| 6 | 6. ಕುರುಡುಮಲೆ | ಮಂಜುನಾಥ | 'ಬಿನ್ ಕೆ.ಎಂ.ವೆಂಕಟರಾಮಯ್ಯ, ನಂ.92 ಕುರುಡುಮಲೆ ಗ್ರಾಮ, ಮುಳಬಾಗಲು ತಾಲ್ಲೂಕು | ಸಾಮಾನ್ಯ | 45 ವರ್ಷ | ಬಲಜಿಗ |
| 7 | 7. ಪದ್ಮಘಟ್ಟ | ನಾರಾಯಣಪ್ಪ | ಬಿನ್ ವೆಂಕಟ್ರಾಮಯ್ಯ, ಭಟ್ರಹಳ್ಳಿ ಗ್ರಾಮ, ಕಪ್ಪಲಮಡಗು ಅಂಚೆ, ಮುಳಬಾಗಲು ತಾಲ್ಲೂಕು | ಸಾಮಾನ್ಯ | 63 ವರ್ಷ | ವಕ್ಕಲಿಗ |
| 8 | 8. ಆಲಂಗೂರು | ಬಿ.ಜೆಯೇಗೌಡ | ಬಿನ್ ಬೆಲ್ಲೇಗೌಡ, 28, ಯಡಹಳ್ಳಿ, ಜಿ.ಮಾರಂಡಹಳ್ಳಿ ಅಂಚೆ ಮುಳಬಾಗಲು ತಾಲ್ಲೂಕು | ಸಾಮಾನ್ಯ | 55 ವರ್ಷ | ವಕ್ಕಲಿಗ |
| 9 | 9. ಕವತನಹಳ್ಳಿ | ಕೆ.ಎಂ.ಸೊಣ್ಣೇಗೌಡ | ಬಿನ್ ಮುನೇಗೌಡ, ಕೆ.ಬಿಕ್ಕನಹಳ್ಳಿ, ಮಲ್ಲನಾಯಕನಹಳ್ಳಿ ಅಂಚೆ, ಮುಳಬಾಗಲು ತಾಲ್ಲೂಕು. | ಸಾಮಾನ್ಯ | 39 ವರ್ಷ | ವಕ್ಕಲಿಗ |
| 10 | 10. ಬೈರಕೂರು | ಪಿ.ಆರ್.ಕುಮಾರಾಚಾರಿ | ಬಿನ್ ಪಿ.ರಾಮಾಚಾರಿ, ನಂ.88 ಗುಡಿಪಲ್ಲಿ, ಮುಳಬಾಗಲು ತಾಲ್ಲೂಕು | ಹಿಂದುಳಿದ ವರ್ಗ "ಅ" | 50 ವರ್ಷ | ವಿಶ್ವಕರ್ಮ |
| 11 | 11. ನಂಗಲಿ | ವಿ.ವಿವೇಕಾನಂದ | ಬಿನ್ ವೆಂಕಟೇಗೌಡ, ನಗವಾರ, ಮುಷ್ಟೂರು ಅಂಚೆ, ಮುಳಬಾಗಲು ತಾಲ್ಲೂಕು | ಹಿಂದುಳಿದ ವರ್ಗ "ಬ" | 42 ವರ್ಷ | ವಕ್ಕಲಿಗ |
| 12 | 12. ವರ್ತಕರ ಕ್ಷೇತ್ರ | ಟಿ.ವೆಂಕಟರಮಣಪ್ಪ | ಬಿನ್ ತಿಪ್ಪಯ್ಯ, ಎನ್.ವಡ್ಡಹಳ್ಳಿ ಮುಳಬಾಗಲು ತಾಲ್ಲೂಕು | ಸಾಮಾನ್ಯ | 43 ವರ್ಷ | ವಕ್ಕಲಿಗ |
| 13 | 13. ಕೃಷಿ ಉತ್ಪನ್ನಗಳ ಮಾರಾಟ ಸಹಕಾರ ಸಂಘಗಳ ಕ್ಷೇತ್ರ | ಡಿ.ಶ್ರೀನಿವಾಸಗೌಡ | ಬಿನ್ ದಾಸೇಗೌಡ ಚಲ್ಲಪ್ಪಲ್ಲಿ ಗ್ರಾಮ ಆಲಂಗೂರು ಅಂಚೆ ಮುಳಬಾಗಲು ತಾಲ್ಲೂಕು | ಸಾಮಾನ್ಯ | 47 ವರ್ಷ | ವಕ್ಕಲಿಗ |

**ಮನೋಜ್ ಕುಮಾರ್ ಮೀನ,**
ಜಿಲ್ಲಾಧಿಕಾರಿಗಳು,
ಕೋಲಾರ ಜಿಲ್ಲೆ, ಕೋಲಾರ.

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಗುರುವಾರ, ಜುಲೈ ೨೧, ೨೦೧೧ (ಆಷಾಢ ೩೦, ಶಕ ವರ್ಷ ೧೯೩೩) | ನಂ. ೬೮೨ |
|---|---|---|



## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ.

### ಅಧಿಸೂಚನೆ

**ನಂ. ಇಎಲ್‌ಎನ್(ಎಪಿಎಂಸಿ)ಸಿಆರ್/12/2011–12, ದಿನಾಂಕ : 21/07/2011**

ಕೋಲಾರ ಜಿಲ್ಲೆಯ **ಶ್ರೀನಿವಾಸಪುರ ತಾಲ್ಲೂಕು** ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಚುನಾವಣೆಯನ್ನು ನಡೆಸಲು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ನಿಯಮಾವಳಿ 1968 ರ ನಿಯಮ 7 ರ ಪ್ರಕಾರ ದಿನಾಂಕ : 25/06/2011 ರಂದು ಚುನಾವಣಾ ತಿಳುವಳಿಕೆಯನ್ನು ನೀಡಲಾಗಿದ್ದು, ಅದರಂತೆ ದಿನಾಂಕ : 17/07/2011 ರಂದು ಚುನಾವಣೆಯನ್ನು ನಡೆಸಿ ಚುನಾವಣಾ ಫಲಿತಾಂಶವನ್ನು ಸಂಬಂಧಪಟ್ಟ ಚುನಾವಣಾಧಿಕಾರಿಗಳು ದಿನಾಂಕ : 19/7/2011 ರಂದು ಘೋಷಿಸಿರುತ್ತಾರೆ.

ಆದುದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966 ರ ಪ್ರಕರಣ 27 ರ ಪ್ರಕಾರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮನೋಜ್ ಕುಮಾರ್ ಮೀನ, ಭಾ.ಆ.ಸೇ., ಜಿಲ್ಲಾಧಿಕಾರಿ, ಕೋಲಾರ ಜಿಲ್ಲೆ, ಕೋಲಾರ ಆದ ನಾನು **ಶ್ರೀನಿವಾಸಪುರ ತಾಲ್ಲೂಕು** ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ವಿವಿಧ ಕ್ಷೇತ್ರಗಳಿಂದ ಚುನಾಯಿತರಾದ ಸದಸ್ಯರುಗಳ ಹೆಸರುಗಳನ್ನು ಈ ಕೆಳಗೆ ನಮೂದಿಸಿದಂತೆ ಅಧಿಸೂಚಿಸಿದ್ದೇನೆ.

| ಕ್ರ. ಸಂ. | ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಚುನಾಯಿತರಾದ ಅಭ್ಯರ್ಥಿಯ ಹೆಸರು | ವಿಳಾಸ | ಮೀಸಲಾತಿ ವರ್ಗ | ವಯಸ್ಸು | ಜಾತಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | 1–ದಳಸನೂರು | ರಾಮಯ್ಯ | ಬಿನ್ ಬೈಚಪ್ಪ ಬಂಗವಾದಿ, ಕಸಬ ಹೋಬಳಿ ಶ್ರೀನಿವಾಸಪುರ ತಾ. | ಸಾಮಾನ್ಯ | 45 | ವಕ್ಕಲಿಗ |
| 2 | 2–ಶ್ರೀನಿವಾಸಪುರ | ಎಂ.ಶ್ರೀನಿವಾಸನ್ | ಬಿನ್ ಎಸ್.ವಿ.ಮುನಿವೆಂಕಟಪ್ಪ ಶ್ರೀನಿವಾಸಪುರ ಟೌನ್ | ಪರಿಶಿಷ್ಟ ಜಾತಿ | 55 | ಆದಿ ಕರ್ನಾಟಕ |
| 3 | 3–ಜೆ.ತಿಮ್ಮಸಂದ್ರ | ನಾಗೇಶ್‌ರೆಡ್ಡಿ | ಬಿನ್ ವೆಂಕಟರೆಡ್ಡಿ, ಜೆ.ತಿಮ್ಮಸಂದ್ರ, ಕಸಬ ಹೋಬಳಿ, ಶ್ರೀನಿವಾಸಪುರ ತಾ. | ಸಾಮಾನ್ಯ | 35 | ವಕ್ಕಲಿಗ |
| 4 | 4–ರೋಣೂರು | ಆರ್.ಕ್ರಿಷ್ಣಪ್ಪ | ಬಿನ್ ಪಾಪಣ್ಣ, ರೋಣೂರು, ರೋಣೂರು ಹೋ, ಶ್ರೀನಿವಾಸಪುರ ತಾ. | ಪರಿಶಿಷ್ಟ ಪಂಗಡ | 60 | ನಾಯಕ |
| 5 | 5–ಯಲ್ದೂರು | ಜಿ.ಎಂ.ಕ್ರಿಷ್ಣಾರೆಡ್ಡಿ | ಬಿನ್ ಮುನಿಶ್ವಾಮಿರೆಡ್ಡಿ, ಗೊಟ್ಟಿಕುಂಟೆ, ಯಲ್ದೂರು ಹೋಬಳಿ, ಶ್ರೀನಿವಾಸುರ ತಾ. | ಹಿಂದುಳಿದ ವರ್ಗ 'ಬ' | 45 | ವಕ್ಕಲಿಗ |
| 6 | 6–ಸೋಮಯಾ ಜಲಪಲ್ಲಿ | ಲಕ್ಷ್ಮಕ್ಕ | ಕೋಂ ರಾಮಯ್ಯ, ಆರ್.ಗೊಲ್ಲಹಳ್ಳಿ ರೋಣೂರು ಹೋಬಳಿ, ಶ್ರೀನಿವಾಸಪುರ ತಾ. | ಮಹಿಳೆ | 50 | ಕಮ್ಮ |
| 7 | 7–ನೆಲವಂಕಿ | ಟಿ.ವಿ.ನಾರಾಯಣ ಸ್ವಾಮಿ | ಬಿನ್ ವೆಂಕಟರಾಮಣ್ಣ, ಉಪ್ಪರಪಲ್ಲಿ ನೆಲವಂಕಿ ಹೋ. ಶ್ರೀನಿವಾಸಪುರ ತಾ. | ಸಾಮಾನ್ಯ | 48 | ವಕ್ಕಲಿಗ |
| 8 | 8–ಲಕ್ಷ್ಮೀಪುರ | ಜಿ.ವಿ.ಜಯರಾಮರೆಡ್ಡಿ | ಬಿನ್ ವೆಂಕಟರೆಡ್ಡಿ, ಗೌಡತಾತನಗಡ್ಡ, ನೆಲವಂಕಿ ಹೋ. ಶ್ರೀನಿವಾಸಪುರ ತಾ. | ಸಾಮಾನ್ಯ | 55 | ವಕ್ಕಲಿಗ |
| 9 | 9–ರಾಯಲ್ಪಾಡು | ಮಂಜುನಾಥರೆಡ್ಡಿ ಎಂ.ಜಿ. | ಬಿನ್‌ಎಂ.ಗೋಪಾಲರೆಡ್ಡಿ ರಾಯಲ್ಪಾಡು, ಶ್ರೀನಿವಾಸಪುರ ತಾ. | ಸಾಮಾನ್ಯ | 25 | ವಕ್ಕಲಿಗ |

| ಕ್ರ. ಸಂ. | ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಚುನಾಯಿತರಾದ ಅಭ್ಯರ್ಥಿಯ ಹೆಸರು | ವಿಳಾಸ | ಮೀಸಲಾತಿ ವರ್ಗ | ವಯಸ್ಸು | ಜಾತಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 10 | 10–ಗೌನಿಪಲ್ಲಿ | ವೆಂಕಟ್ರಾಯಪ್ಪ | ಬಿನ್ ಗುಮ್ಮಣ್ಣ ಬಚ್ಚಿರೆಡ್ಡಿಗಾರಿಪಲ್ಲಿ, ರಾಯಲ್ಪಾಡು ಹೋ. ಶ್ರೀನಿವಾಸಪುರ ತಾ. | ಸಾಮಾನ್ಯ | 60 | ಒಕ್ಕಲಿಗ |
| 11 | 11–ಅಡ್ಡಗಲ್ | ಪಿ.ಟಿ.ಶಂಕರಪ್ಪ | ಬಿನ್ ಪಿ.ತಿಮ್ಮಯ್ಯ, ಗೌನಿಪಲ್ಲಿ, ರಾಯಲ್ಪಾಡು ಹೋ. ಶ್ರೀನಿವಾಸಪುರ ತಾ. | ಹಿಂದುಳಿದ ವರ್ಗ 'ಅ' | 42 | ಕುರುಬ |
| 12 | 12–ವರ್ತಕರ ಕ್ಷೇತ್ರ | ಟಿ.ಮುಕ್ತಾರ್ ಅಹಮದ್ | ಬಿನ್ ಟಿ. ಮಹಮದ್ ಬಷೀರ್, ಶ್ರೀನಿವಾಸಪುರ ಟೌನ್ | ಸಾಮಾನ್ಯ | 50 | ಮುಸ್ಲಿಂ |
| 13 | 13–ಕೃಷಿ ಉತ್ಪನ್ನಗಳ ಮಾರಾಟ ಸಹಕಾರ ಸಂಘಗಳ ಕ್ಷೇತ್ರ | ಎಂ.ವೆಂಕಟರೆಡ್ಡಿ | ಬಿನ್ ಮುನಿಯಪ್ಪ, ಮಣಿಗಾನಹಳ್ಳಿ, ರೋಣೂರು ಹೋ. ಶ್ರೀನಿವಾಸಪುರ ತಾ. | ಸಾಮಾನ್ಯ | 49 | ಒಕ್ಕಲಿಗ |

**ಮನೋಜ್ ಕುಮಾರ್ ಮೀನ,**
ಜಿಲ್ಲಾಧಿಕಾರಿಗಳು,
ಕೋಲಾರ ಜಿಲ್ಲೆ, ಕೋಲಾರ.

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಗುರುವಾರ, ಜುಲೈ ೨೧, ೨೦೧೧ (ಆಷಾಢ ೩೦, ಶಕ ವರ್ಷ ೧೯೩೩) | ನಂ. ೬೮೮ |
|---|---|---|

**MINORITY WELFARE SECRETARIAT**

**NOTIFICATION**

Form No. 8
[See Rule 14]

**No. MWD 237 WES 2011, Bangalore, dated: 21-07-2011.**

(To be issued by the Government for fixing the schedule of Election)

The Government of Karnataka hereby notifies the Schedule of election as hereunder for filling up the vacancies of members to the Karnataka State Board of Wakfs under sub-clause(i) to (iv) of clause (b) of sub-section (1) of Section 14 of the Wakfs Act, 1995/as per sub-section (3) of Section 14 or Wakfs Act, 1995 for the following Electoral Colleges.

| Sl. No. | Name of Electoral College | No. of Vacancies |
|---|---|---|
| 1. | Muslim members of Parliament from State or, as the case may be, the Union Territory of Delhi (as per Rule 14 of Karnataka Wakf Rules 1997) | 1 (One) |
| 2. | Muslim Members from State Legislature | 2 (Two) |
| 3. | Muslim Members from Bar Council of State | 1 (One) |
| 4. | Muthawallis of Wakfs having an annual income of rupees One lakh and above | 2 (Two) |

The following is the schedule of election:

1. Date of commencement of election : 21-07-2011
2. Date of Notification by Returning Officer in Form 9 : 22-07-2011
3. Last date for filing Nomination : 29-07-2011
4. Date of Scrutiny of Nomination : 30-07-2011
5. Last date for withdrawal : 03-08-2011
6. Date of Polling : 16-08-2011

7. Date of Counting : 17-08-2011
8. Date of closing of election : 20-08-2011

The above Election shall be conducted in accordance with Karnataka Wakf Rules, 1997.

By Order and in the Name of the Governor of Karnataka,

**ABBAS SHARIEFF**
Under Secretary to Government
Minority Welfare Department


# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಶುಕ್ರವಾರ, ಜುಲೈ ೨೨, ೨೦೧೧ (ಆಷಾಢ ೩೧, ಶಕ ವರ್ಷ ೧೯೩೩) | ನಂ. ೬೮೯ |
|---|---|---|


## HEALTH AND FAMILY WELFARE SECRETARIAT

### NOTIFICATION

### No. HFW 110 PTD 2009, Bangalore, Dated: 22nd July, 2011

Whereas the draft of the Karnataka Civil Services (Absorption of Lectures (Ayurveda / yoga and Naturopathy / Unani / Homoeopathy)) (Teaching Cadre) (Special) Rules 2010, was published as required by sub-section (i) of section 3 read with section 8 of the Karnataka State Civil Services Act, 1978 (Karnataka Act 14 of 1990) in Notification No.HFW 110 PTD 2009, Dated: 8th July 2010 in Part IV-A (No. 796) of the Karnataka Gazette Extra-ordinary dated: 8th July, 2010 inviting objection and suggestions from all persons likely to be effected thereby within fifteen days from the date of publication in the Official Gazette.

And whereas said Gazette was made available to the public on 8.7.2010.

And whereas objections and suggestions received, have been considered by Government.

Now therefore, in exercise of the powers conferred by sub-section (1) of the section 3 read with section 8 of the Karnataka State Civil Services Act, 1978 (Karnataka Act 14 of 1990), the Government of Karnataka hereby makes the following rules, namely:

**RULES**

**1. Title and Commencement:-** 1(1) These rules may be called the Karnataka Civil Services (Absorption of Lectures (Ayurveda / yoga and Naturopathy / Unani / Homoeopathy)) (Teaching Cadre) (Special) Rules 2010,

2) They shall come into force from the date of their publication in the Official Gazette.

**2. Definition:-** (1) In these rules, unless the context Otherwise requires:-

(a) "Contract Lecturer" means a lecturer appointed in the department of Indian Systems of Medicine and Homoeopathy on contract basis vide Notification specified in schedule-I and who is in the service on the date of commencement of these rules.

(b) "Schedule" means the schedule appended to these rules.

(2) Other words and expressions used in these rules but not defined shall have the same meaning respectively assigned to them in the Karnataka Civil Services (General Recruitment) Rule, 1977.

**3. ABSORPTION OF CONTRACT LECTURERS IN THE INDIAN SYSTEMS OF MEDICINE (AYURVEDA / UNANI / HOMOEOPATHY) DEPARTMENT INTO THE STATE CIVIL SERVICES:-**

(1) Notwithstanding anything contained in the Karnataka Civil Services (General Recruitment) Rules, 1977 or the Karnataka Indian System of Medicine (Collegiate branch of teaching cadre excluding Homoeopathy) (Teaching Cadre) (Recruitment) Rules, 1995 or the Karnataka Civil Services (Direct Recruitment by the competitive examinations and selection) (General) Rules, 2006 or any other rules made or deemed to have been made under the provisions of the Karnataka State Civil Services Act, 1978 (Karnataka Act 14 of 1990), every Contract Lecturer specified in the column (2) of the Schedule-II and continued as such on the date of commencement of these rules, be absorbed in the corresponding category of post and scale of pay specified in the column (5) and (6) thereof respectively, in the Indian Systems of Medicine and Homoeopathy Services.

**Provided further that no such person shall be absorbed:-**

(i) If he/she was disqualified for appointment under the Karnataka Civil Services (General Recruitment Rules, 1977 on the date of his appointment as contract Lecturer (Ayush):

(ii) If the he/she does not possess the minimum academic qualification, if any, specified in the rules of recruitment applicable for recruitment to the said posts:

(iii) In any post reserved for the persons belonging to the category of Schedule Castes, Schedule Tribes of Other Backward Classes to which he/she was appointed as Contract Lecturer, if he/she is found to be not belonging to such Castes. Tribes of Classes, as the case may be otherwise such posts shall be treated as backlog to be filled by process of special recruitment from among these caste/tribe classes.

(2) The Contract Lecturers, who are absorbed under these rules, shall not be deputed for higher studies, at least for a period of five years from the date of such absorption.

**4. PAY, PENSION, LEAVE AND SENIORITY OF PERSONS ABSORBED UNDER THESE RULES:-**

Notwithstanding anything contained in the Karnataka Civil Services Rules:-

(i) The initial basic pay of Contract Lecturer shall be fixed at the minimum of the pay scale applicable to the category of post to which he/she is absorbed under rule 3;

(ii) The services rendered by a person as Contract Lecturer prior to the date of absorption shall not count for the purpose of leave, pay, pension, seniority and grants of selection time scale of pay under Karnataka Civil Services (Time Bound Advancement) Rules, 1983 and for Grant of Senior Scale of pay under the Karnataka Civil Services (Automatic grant of Special Promotion to the senior scale of pay) Rules, 1991 and additional increment for having completed twenty years of service in the single cadre.

(iii) As regards pension and other retirement benefits they shall be governed by terms and conditions as stipulated in Government Order No. FD (Spl) 04 PET 2005. dates 31-03-2006. i.e.. New Defined contributory pension scheme introduced w.e.f. 01-04-2006.

**5. APPLICATION OF OTHER RULES:-** The provisions of the Karnataka Civil Services Rules, the Karnataka Civil Services (Conduct) Rules, 1966 and all other rules regulating the conditions of service of Government Servants in so far as they are not inconsistent with the provisions of these rules, shall apply to the persons absorbed under these rules.

**SCHEDULE – I**

(See Rule 2(1)(a))

| | |
|---|---|
| No.HFW 400 PTD 2006 | Dated 31-01-2007 |
| No.HFW 23 PTD 2007 | Dated 13-03-2007 |
| No.HFW 377 PTD 2007 | Dated 05-01-2008 |
| No.HFW 318 PTD 2008 | Dated 10-12-2008 |
| No.HFW 398 PTD 2007 | Dated 07-02-2008 |
| No.HFW 303 PTD 2008 | Dated 13-01-2009 |
| No.HFW 387 PTD 2007 | Dated 19-02-2008 |
| No.HFW 394 PTD 2008 | Dated 12-01-2009 |
| No.HFW 376 PTD 2007 | Dated 05-04-2008 |
| No.HFW 32 PTD 2009 | Dated 31-03-2009 |

**SCHEDULE - II**

See rule 3

| Sl No | Name of the Contract Lecturer And Government Notification under which he/she is appointed | Date of Birth | Date of Appointment on Contract basis | Category of posts in which contract Lecturer is absorbed | Pay Scale of the Post in which absorbed (AICTE Scale) | Category | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| **Government Notification No. HFW 400 PTD 2006, dated: 31-01-2007.** | | | | | | | |
| **AYURVEDA** | | | | | | | |
| 1 | Dr: Dharani | 12-08-79 | 31-01-2007 | Group – B | 8000 - 13500 | GM | |
| 2 | Dr: Srinivas Masalekar | 23-09-79 | 31-01-2007 | Group – B | 8000 - 13500 | GM(R) | |
| 3 | Dr: Shaila Borannavar | 01-05-80 | 31-01-2007 | Group – B | 8000 - 13500 | GM(FK) | |
| 4 | Dr: Shivaling . K.Bendikai | 01-07-75 | 31-01-2007 | Group – B | 8000 - 13500 | CAT-I | |
| 5 | Dr: Aravinda Yadav .S | 11-05-77 | 31-01-2007 | Group – B | 8000 - 13500 | CAT-I | |
| 6 | Dr: V.M.Hugar | 08-06-78 | 31-01-2007 | Group – B | 8000 - 13500 | 2A-(G) | |
| 7 | Dr: Shivanand Ganachari | 13-11-79 | 31-01-2007 | Group – B | 8000 - 13500 | GM(R) | |
| 8 | Dr: C.M.M. Raju | 20-01-76 | 31-01-2007 | Group – B | 8000 - 13500 | 2A(G) | |
| 9 | Dr: Ramesh M.S | 02-12-75 | 31-01-2007 | Group – B | 8000 - 13500 | ST(G) | |
| 10 | Dr: Syed Munwer pasha | 06-07-78 | 31-01-2007 | Group – B | 8000 - 13500 | 2B | |
| 11 | Dr: Mohan Kumari K.M | 12-04-76 | 31-01-2007 | Group – B | 8000 - 13500 | II-A(F) | |
| 12 | Dr: Srikanth V Sajjanar | 23-12-78 | 31-01-2007 | Group – B | 8000 - 13500 | GM(G) | |
| 13 | Dr: Nikitha Sirigere | 28-12-78 | 31-01-2007 | Group – B | 8000 - 13500 | GM | |
| 14 | Dr: Duragappa Harijan | 01-08-76 | 31-01-2007 | Group – B | 8000 - 13500 | SC | |
| 15 | Dr: Shivalingappa J. Arakeri | 29-01-79 | 31-01-2007 | Group – B | 8000 - 13500 | SC | |
| 16 | Dr: Santosh L. Yadahalli | 27-03-79 | 31-01-2007 | Group – B | 8000 - 13500 | III-A(G) | |
| 17 | Dr: Rajesh Sugur | 05-01-79 | 31-01-2007 | Group – B | 8000 - 13500 | III-B | |
| 18 | Dr: Suryakanth. V.Ghule | 10-02-74 | 31-01-2007 | Group – B | 8000 - 13500 | GM | |
| 19 | Dr: Andana Gowda Patil | 03-05-73 | 31-01-2007 | Group – B | 8000 - 13500 | GM(PH) | |
| 20 | Dr: Vishwanath K | 11-05-79 | 31-01-2007 | Group – B | 8000 - 13500 | GM | |
| 21 | Dr: Ravi R. Chavan | 22-07-78 | 31-01-2007 | Group – B | 8000 - 13500 | SC(R) | |
| 22 | Dr: Rathi S | 01-06-78 | 31-01-2007 | Group – B | 8000 - 13500 | SC(R) | |
| 23 | Dr:Sudheendra G. Navale | 04-07-77 | 31-01-2007 | Group – B | 8000 - 13500 | II-A(G) | |
| 24 | Dr: Sampathkumar S. Bellam | 22-07-74 | 31-01-2007 | Group – B | 8000 - 13500 | SC | |
| 25 | Dr: Doddabasayya Sangayyaswamy | 01-06-77 | 31-01-2007 | Group – B | 8000 - 13500 | III-B(G) | |
| 26 | Dr: Faridha Begum Shaik | 19-04-78 | 31-01-2007 | Group – B | 8000 - 13500 | II-B(R) | |
| 27 | Dr: Mamthashri S | 03-09-78 | 31-01-2007 | Group – B | 8000 - 13500 | SC-(F) | |
| 28 | Dr: Shilpa shree P.N | 28-09-79 | 31-01-2007 | Group – B | 8000 - 13500 | II-A(G) | |
| 29 | Dr: Anuroopa H.K | 06-11-79 | 31-01-2007 | Group – B | 8000 - 13500 | GM(G) | |
| 30 | Dr: Srinivas Yadav K | 29-03-77 | 31-01-2007 | Group – B | 8000 - 13500 | CAT-I | |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 31 | Dr: Musthak Ahmmad Negalur | 01-06-74 | 31-01-2007 | Group – B | 8000 - 13500 | CAT-I(G) | |
| 32 | Dr: Sanjaykumar N.D | 02-07-79 | 31-01-2007 | Group – B | 8000 - 13500 | GM(G) | |
| 33 | Dr: Vijayalakshmi G.H | 26-06-73 | 31-01-2007 | Group – B | 8000 - 13500 | GM(G) | |
| 34 | Dr: Katti Anand Basalingappa | 07-08-75 | 31-01-2007 | Group – B | 8000 - 13500 | III-B(R) | |
| 35 | Dr: Raju G Kurane | 01-06-75 | 31-01-2007 | Group – B | 8000 - 13500 | SC (G) | |
| 36 | Dr: Adarsha H.G | 18-05-79 | 31-01-2007 | Group – B | 8000 - 13500 | GM(G) | |
| 37 | Dr: Nagesh H.D | 01-05-80 | 31-01-2007 | Group – B | 8000 - 13500 | II-A | |
| 38 | Dr: Vasudev Anandarao Chate | 01-07-74 | 31-01-2007 | Group – B | 8000 - 13500 | GM(R) | |
| 39 | Dr: Suman | 20-12-79 | 31-01-2007 | Group – B | 8000 - 13500 | II-A(F) | |
| 40 | Dr: Nalini | 09-06-79 | 31-01-2007 | Group – B | 8000 - 13500 | SC(G) | |
| **Government Notification No. HFW 23 PTD 2007, Dated: 13-03-2007** | | | | | | | |
| **HOMEOPATHY** | | | | | | | |
| 1 | Dr: Jyothi, A. Mool Bharathi | 14-01-77 | 31-01-2007 | Group – B | 8000 - 13500 | SC | |
| 2 | Dr: Vijayakrishna V | 30-06-74 | 31-01-2007 | Group – B | 8000 - 13500 | GM | |
| 3 | Dr: Vijayalakshmi M Angadi | 08-01-71 | 31-01-2007 | Group – B | 8000 - 13500 | III -B | |
| 4 | Dr: Shobha B Mali Patil | 22-05-76 | 31-01-2007 | Group – B | 8000 - 13500 | II -A | |
| 5 | Dr: Jyotirmai B Janabow | 15-08-80 | 31-01-2007 | Group – B | 8000 - 13500 | CAT-I | |
| 6 | Dr: Anasuya M Akareddy | 22-07-77 | 31-01-2007 | Group – B | 8000 - 13500 | III -B | |
| 7 | Dr: Prathima S Naganoor | 18-06-74 | 31-01-2007 | Group – B | 8000 - 13500 | III- A | |
| 8 | Dr: Sharanappa Veerapa Hakkaldaddi | 04-08-74 | 31-01-2007 | Group – B | 8000 - 13500 | GM | |
| 9 | Dr: Veerabhadrappa C | 21-10-76 | 31-01-2007 | Group – B | 8000 - 13500 | III -B | |
| 10 | Dr: Mudasir M Mulla | 21-05-78 | 31-01-2007 | Group – B | 8000 - 13500 | II- B | |
| **Government Notification No. HFW 23 PTD 2007, Dated: 13-03-2007** | | | | | | | |
| **UNANI** | | | | | | | |
| 1 | Dr: Ameena Yasmeen | 14-08-74 | 31-01-2007 | Group – B | 8000 - 13500 | GM | |
| 2 | Dr: Aisha Anjum A | 10-08-79 | 31-01-2007 | Group – B | 8000 - 13500 | GM | |
| 3 | Dr: Mohammad Haneef Hanamsagar | 19-01-75 | 31-01-2007 | Group – B | 8000 - 13500 | GM(R) | |
| 4 | Dr: Ayesha Tabasum | 17-11-80 | 31-01-2007 | Group – B | 8000 - 13500 | II – B | |
| 5 | Dr: Naheeda Tabasum | 10-08-71 | 31-01-2007 | Group – B | 8000 - 13500 | II – B | |
| 6 | Dr: Suma Nagaraj | 03-07-76 | 31-01-2007 | Group – B | 8000 - 13500 | GM (PH) | |

By Order and in the Name of the Governor of Karnataka

**B.BHEEMAPPA**
Deputy Secretary to Government
Health and Family Welfare Department
(Medical Education)

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಶುಕ್ರವಾರ, ಜುಲೈ ೨೨, ೨೦೧೧ (ಆಷಾಢ ೩೧, ಶಕ ವರ್ಷ ೧೯೩೩) | ನಂ. ೬೯೨ |
|---|---|---|

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ಕಲಂ 4 ರ ಕೆಳಗೆ ಕೈಬಿಡುವ ಅಧಿಸೂಚನೆ**

**ಸಂಖ್ಯೆ: ಸಿಐ 45 ಎಸ್‌ಪಿಕ್ಯೂ 2010, ಬೆಂಗಳೂರು, ದಿನಾಂಕ: 21.07.2011**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966 (ಕರ್ನಾಟಕ ಕಾಯ್ದೆ 18 : 1966) ರ ಕಲಂ 28 ರ ಉಪ ಕಲಂ 1 ನೇದ್ದರ ಕೆಳಗೆ ಸರಕಾರದ ಅಧಿಸೂಚನೆ ಸಂಖ್ಯೆ: ಸಿಐ 45 ಎಸ್‌ಪಿಕ್ಯೂ 2010 ದಿನಾಂಕ: 04–11–2010 ನೇದ್ದು ಕರ್ನಾಟಕ ರಾಜ್ಯ ಪತ್ರದ ಪುಟ ಸಂಖ್ಯೆ 1 ರಿಂದ 12 ರ ವರೆಗೆ ಭಾಗ–3 ರಲ್ಲಿ ದಿನಾಂಕ: 09–11–2010 ರಂದು ಪ್ರಕಟಗೊಂಡ ಈ ಕೆಳಗಿನ ಅನುಸೂಚಿಯಲ್ಲಿ ಕಾಣಿಸಿರುವ ಜಮೀನುಗಳು ಹಾಗೂ ಅವುಗಳ ಕ್ಷೇತ್ರವನ್ನು ಅಂಕಣ 4 ರಿಂದ 7 ರವರೆಗೆ ವಿವರಿಸಿದ ಪರಿಮಿತಿಯೊಂದಿಗೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966 ರ ಕಲಂ 4 ರನ್ವಯ ವಿಹಿತವಾಗಿರುವ ಅಧಿಕಾರದ ಮೇರೆಗೆ "ಕೈಗಾರಿಕಾ ಪ್ರದೇಶದಿಂದ" ಕೈಬಿಡಲಾಗಿದೆ ಅಂತಾ ಕರ್ನಾಟಕ ಸರಕಾರವು ಈ ಮೂಲಕ ಘೋಷಿಸುತ್ತದೆ.

**: : ಅನುಸೂಚಿ : :**

**ಗ್ರಾಮ : ಮುಧೋಳ** **ತಾಲೂಕ : ಮುಧೋಳ** **ಜಿಲ್ಲೆ : ಬಾಗಲಕೋಟೆ**

| ಅ. ನಂ. | ಸ. ನಂ. | ಕ್ಷೇತ್ರ ಎ–ಗುಂ–ಆ | ಚಕ್ ಬಂದಿ (ಚತು:ಸೀಮೆ) 28(1) ರ ಅಧಿಸೂಚನೆ ಪ್ರಕಾರ | | | |
|---|---|---|---|---|---|---|
| | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| **1** | **2** | **3** | **4** | **5** | **6** | **7** |
| 1 | 144/2ಇ ಪೈ | 0–10–00 | 145 | 143 | ಮಾಲಾಪೂರ ಗಡಿ | 156 |
| | **ಒಟ್ಟು** | **0–10–00** | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಹೆಚ್. ಶೇಷಗಿರಿ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ, ಜುಲೈ ೨೨, ೨೦೧೧ (ಆಷಾಢ ೩೧, ಶಕ ವರ್ಷ ೧೯೩೩) | ನಂ. ೬೯೩ |
|---|---|---|

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 33 ಶಾಸನ 2011, ಬೆಂಗಳೂರು, ದಿನಾಂಕ: 22.07.2011**

ಕರ್ನಾಟಕ ಜಾನಪದ ವಿಶ್ವವಿದ್ಯಾಲಯ ಅಧ್ಯಾದೇಶ, 2011 – ಇದಕ್ಕೆ 2011ರ ಜುಲೈ ತಿಂಗಳ ಇಪ್ಪತ್ತೆರಡನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2011ರ ಕರ್ನಾಟಕ ಅಧ್ಯಾದೇಶ ಸಂಖ್ಯೆ:01 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2011ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 01**

**ಕರ್ನಾಟಕ ಜಾನಪದ ವಿಶ್ವವಿದ್ಯಾಲಯ ಅಧ್ಯಾದೇಶ, 2011**

(ಭಾರತ ಗಣರಾಜ್ಯದ ಆರವತ್ತೆರಡನೆಯ ವರ್ಷದಲ್ಲಿ ಕರ್ನಾಟಕ ರಾಜ್ಯಪಾಲರಿಂದ ಪ್ರಖ್ಯಾಪಿತವಾಗಿ 2011ರ ಜುಲೈ 22ನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

ಕರ್ನಾಟಕ ರಾಜ್ಯ ಜಾನಪದ ವಿಶ್ವವಿದ್ಯಾಲಯವನ್ನು ಸ್ಥಾಪಿಸಿ ನಿಗಮಿತಗೊಳಿಸುವುದಕ್ಕಾಗಿ ಉಪಬಂಧ ಕಲ್ಪಿಸಲು ಒಂದು ಅಧ್ಯಾದೇಶ.

ಕರ್ನಾಟಕ ರಾಜ್ಯ ವಿಧಾನಮಂಡಲದ ಉಭಯ ಸದನಗಳು ಅಧಿವೇಶನದಲ್ಲಿಲ್ಲದಿರುವುದರಿಂದ ಮತ್ತು ಜಾನಪದ ಕಲಿಕೆಯ ಮುನ್ನಡೆಯನ್ನು ಸಾಧಿಸುವುದಕ್ಕಾಗಿ ಮತ್ತು ಸಂಶೋಧನೆಯನ್ನು ಮುಂದುವರೆಸುವುದಕ್ಕಾಗಿ ಅದಕ್ಕೆಂದೇ ಅನನ್ಯವಾಗಿ ನಿರತವಾದ ಒಂದು ಏಕ ಘಟಕೀಯ ಮತ್ತು ನಿವಾಸಿ ಸ್ವರೂಪದ ವಿಶ್ವವಿದ್ಯಾಲಯವನ್ನು ಸ್ಥಾಪಿಸುವುದಕ್ಕಾಗಿ ಶೀಘ್ರ ಕ್ರಮ ಕೈಗೊಳ್ಳುವುದನ್ನು ಅವಶ್ಯಗೊಳಿಸುವಂಥ ವಿದ್ಯಮಾನಗಳು ಉಂಟಾಗಿವೆಯೆಂದು ಕರ್ನಾಟಕ ರಾಜ್ಯಪಾಲರಿಗೆ ಮನದಟ್ಟಾಗಿರುವುದರಿಂದ;

ಈಗ ಭಾರತ ಸಂವಿಧಾನದ 213ನೇ ಅನುಚ್ಛೇದದ (1)ನೇ ಖಂಡದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು ಈ ಮುಂದಿನ ಅಧ್ಯಾದೇಶವನ್ನು ಪ್ರಖ್ಯಾಪಿಸುತ್ತಾರೆ, ಎಂದರೆ:-

## ಅಧ್ಯಾಯ – I

### ಪ್ರಾರಂಭಿಕ

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧ್ಯಾದೇಶವನ್ನು ಕರ್ನಾಟಕ ಜಾನಪದ ವಿಶ್ವವಿದ್ಯಾಲಯ ಅಧ್ಯಾದೇಶ, 2011 ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** ಈ ಅಧ್ಯಾದೇಶದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(i) **"ಶೈಕ್ಷಣಿಕ ಪರಿಷತ್ತು"** ಎಂದರೆ, 27ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿತವಾದ ಶೈಕ್ಷಣಿಕ ಪರಿಷತ್ತು;

(ii) **"ಗೊತ್ತುಪಡಿಸಿದ ದಿನಾಂಕ"** ಎಂದರೆ, ಈ ಅಧ್ಯಾದೇಶವು ಪ್ರಾರಂಭಗೊಳ್ಳಲು ಗೊತ್ತುಪಡಿಸಿದ ದಿನಾಂಕ;

(iii) "ವಿಭಾಗ", "ಅಧ್ಯಯನಗಳ ವಿಭಾಗ", "ಸ್ನಾತಕೋತ್ತರ ಪದವಿ ವಿಭಾಗ" ಎಂದರೆ, ವಿಶ್ವವಿದ್ಯಾಲಯವು ನಡೆಸುತ್ತಿರುವ ಮತ್ತು ನಿರ್ವಹಿಸುತ್ತಿರುವ ವಿಶ್ವವಿದ್ಯಾಲಯದಲ್ಲಿನ ವಿಭಾಗ, ಅಧ್ಯಯನಗಳ ವಿಭಾಗ ಮತ್ತು ಸ್ನಾತಕೋತ್ತರ ಪದವಿ ವಿಭಾಗ;

(iv) **"ಸರ್ಕಾರ"** ಎಂದರೆ, ರಾಜ್ಯ ಸರ್ಕಾರ;

(v) **"ವಿದ್ಯಾರ್ಥಿನಿಲಯ"** ಎಂದರೆ, ಈ ಅಧ್ಯಾದೇಶದ ಉಪಬಂಧಗಳಿಗೆ ಅನುಸಾರವಾಗಿ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗಾಗಿ ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ಅಥವಾ ಅದರಿಂದ ಮನ್ನಣೆ ಪಡೆದ ಒಂದು ನಿವಾಸ ಘಟಕ;

(vi) **"ಜಾನಪದ"** ಎಂದರೆ, ಜಾನಪದ ಅಧ್ಯಯನ ಹಾಗೂ ಜನರು ಮೌಖಿಕವಾಗಿ ತಮ್ಮದಾಗಿಸಿಕೊಂಡಿರುವ ಜಾನಪದ ಸಂಸ್ಕೃತಿಯ ಎಲ್ಲಾ ಪ್ರಕಾರಗಳನ್ನು ಒಳಗೊಳ್ಳುತ್ತದೆ.

(vii) **"ನಿಯಮಿಸಲಾದುದು"** ಎಂದರೆ, ಪರಿನಿಯಮಗಳಿಂದ ನಿಯಮಿಸಲಾದುದು;

(viii) **"ಪರಿನಿಯಮಗಳು"** ಎಂದರೆ ಈ ಅಧ್ಯಾದೇಶದ ಅಡಿಯಲ್ಲಿ ರಚಿಸಲಾದ ಪರಿನಿಯಮಗಳು;

(ix) "ಸಿಂಡಿಕೇಟ್" ಎಂದರೆ, 24ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿತವಾದ ಸಿಂಡಿಕೇಟ್;

(x) **"ಅಧ್ಯಾಪಕರು"** ಎಂದರೆ, ಸಹಾಯಕ ಪ್ರಾಧ್ಯಾಪಕರು, ಸಹ ಪ್ರಾಧ್ಯಾಪಕರು, ಪ್ರಾಧ್ಯಾಪಕರು, ವಿಶ್ರಾಂತ ಪ್ರಾಧ್ಯಾಪಕರು ಮತ್ತು ಪರಿನಿಯಮಗಳಿಂದ ಅಧ್ಯಾಪಕರೆಂದು ಘೋಷಿತರಾಗಬಹುದಾದ ಇತರೆ ಅಂಥ ವ್ಯಕ್ತಿಗಳು;

(xi) **"ವಿಶ್ವವಿದ್ಯಾಲಯ"** ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿತವಾದ ಕರ್ನಾಟಕ ಜಾನಪದ ವಿಶ್ವವಿದ್ಯಾಲಯ;

(xii) **"ವಿಶ್ವವಿದ್ಯಾಲಯ ಅನುದಾನ ಆಯೋಗ"** ಎಂದರೆ, ವಿಶ್ವವಿದ್ಯಾಲಯ ಅನುದಾನ ಆಯೋಗ ಅಧಿನಿಯಮ, 1956ರ (1956 ರ ಕೇಂದ್ರ ಅಧ್ಯಾದೇಶ3) 4ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿತವಾದ ಆಯೋಗ;

(xiii) **"ವಿಶ್ವವಿದ್ಯಾಲಯ ಗ್ರಂಥಾಲಯ"** ಎಂದರೆ, ವಿಶ್ವವಿದ್ಯಾಲಯವು ಪ್ರಾರಂಭಿಸಿರಲಿ ಅಥವಾ ಇಲ್ಲದಿರಲಿ, ಅದರಿಂದ ನಿರ್ವಹಿಸಲ್ಪಡುವ ಗ್ರಂಥಾಲಯ.

## ಅಧ್ಯಾಯ – II

### ವಿಶ್ವವಿದ್ಯಾಲಯ

**3. ವಿಶ್ವವಿದ್ಯಾಲಯದ ಸ್ಥಾಪನೆ.–**(1) ಜಾನಪದ ಕಲಿಕೆಯ ಮುನ್ನಡೆಯನ್ನು ಸಾಧಿಸುವುದಕ್ಕಾಗಿ ಮತ್ತು ಸಂಶೋಧನೆಯನ್ನು ಮುಂದುವರೆಸುವುದಕ್ಕಾಗಿ, "ಕರ್ನಾಟಕ ಜಾನಪದ ವಿಶ್ವವಿದ್ಯಾಲಯ" ಎಂಬ ಹೆಸರಿನ ಒಂದು ವಿಶ್ವವಿದ್ಯಾಲಯವನ್ನು ಸ್ಥಾಪಿಸತಕ್ಕದ್ದು.

(2) ವಿಶ್ವವಿದ್ಯಾಲಯವು ಒಂದು ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಶಾಶ್ವತ ಉತ್ತರಾಧಿಕಾರಿಯನ್ನು ಹೊಂದಿದ್ದು ಹಾಗೂ ಸಾಮಾನ್ಯ ಮೊಹರನ್ನು ಹೊಂದಿರತಕ್ಕದ್ದು ಮತ್ತು ಸದರಿ ಹೆಸರಿನಿಂದ ದಾವೆ ಹೂಡತಕ್ಕದ್ದು ಹಾಗೂ ದಾವೆಗೊಳಗಾಗತಕ್ಕದ್ದು.

(3) ವಿಶ್ವವಿದ್ಯಾಲಯವು ಏಕ ಘಟಕೀಯ ಮತ್ತು ನಿವಾಸಿ ಸ್ವರೂಪದ್ದಾಗಿರತಕ್ಕದ್ದು.

(4) ಸರ್ಕಾರದ ಮತ್ತು ಸಂಬಂಧಪಟ್ಟ ವಿಶ್ವವಿದ್ಯಾಲಯದ ಪೂರ್ವಾನುಮತಿಯ ಹೊರತು, ರಾಜ್ಯದಲ್ಲಿರುವ ಇತರ ಯಾವುದೇ ವಿಶ್ವವಿದ್ಯಾಲಯಕ್ಕೆ ಸಂಯೋಜಿತವಾದ ಅಥವಾ ಸಹವರ್ತಿತವಾದ ಅಥವಾ ಅದರಿಂದ ನಿರ್ವಹಿಸಲಾದ ಯಾವೊಂದು ಸಂಸ್ಥೆಗೂ ಯಾವುದೇ ಉದ್ದೇಶಕ್ಕೆ ಮಾನ್ಯತೆ ನೀಡತಕ್ಕದ್ದಲ್ಲ.

(5) ವಿಶ್ವವಿದ್ಯಾಲಯದ ಕೇಂದ್ರ ಕಾರ್ಯಸ್ಥಾನವು ಹಾವೇರಿ ಜಿಲ್ಲೆಯ ಶಿಗ್ಗಾಂವಿ ತಾಲ್ಲೂಕಿನ ಗೋಟಗೋಡಿ ಪ್ರದೇಶದ ಹತ್ತು ಕಿಲೋಮೀಟರುಗಳ ಪರಿಧಿಯೊಳಗಿರುವ ಯಾವುದೇ ಸ್ಥಳದಲ್ಲಿ ಇರತಕ್ಕದ್ದು.

(6) ವಿಶ್ವವಿದ್ಯಾಲಯವು ರಾಜ್ಯದ ಇತರ ಸೂಕ್ತ ಸ್ಥಳಗಳಲ್ಲಿ ಪ್ರಾದೇಶಿಕ ಕೇಂದ್ರಗಳನ್ನು ತೆರೆಯುವ ಅಧಿಕಾರವನ್ನು ಹೊಂದಿರತಕ್ಕದ್ದು.

**4. ಜಾನಪದ ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳು.–** ಜಾನಪದ ವಿಶ್ವವಿದ್ಯಾಲಯವು ಈ ಮುಂದಿನ ಧ್ಯೇಯೋದ್ದೇಶಗಳನ್ನು ಹೊಂದಿರತಕ್ಕದ್ದು, ಎಂದರೆ:–

(1) ಕರ್ನಾಟಕದ ಜನಪದ ಸಾಹಿತ್ಯ, ಕಲೆ, ಸಂಗೀತ, ರಂಗಭೂಮಿ, ಕರಕುಶಲಕಲೆ, ಜಾನಪದ ವೈದ್ಯಪದ್ಧತಿ, ಆಹಾರ, ಪಾನೀಯ, ಗುಡಿಕೈಗಾರಿಕೆ ಮೊದಲಾದ ಎಲ್ಲ ವಿಷಯಗಳನ್ನು ಒಳಗೊಂಡ ಕ್ಷೇತ್ರಗಳಲ್ಲಿ ಉನ್ನತ ಶಿಕ್ಷಣ ಮತ್ತು ಸಂಶೋಧನೆಗೆ ಅವಕಾಶವನ್ನು ಕಲ್ಪಿಸುವುದು;

(2) ಕನ್ನಡ ಹಾಗೂ ಇತರ ದ್ರಾವಿಡ ಭಾಷೆಗಳನ್ನು ಮಾತನಾಡುವ ಜನರ ಮತ್ತು ಇತರ ಭಾಷೆಗಳನ್ನು ಮಾತನಾಡುವ ಜನರ ಸಂಸ್ಕೃತಿ ಅಧ್ಯಯನಕ್ಕೆ ಅವಕಾಶ ಕಲ್ಪಿಸುವುದು;

(3) "ದೇಶೀಯವು ಏಕ ಅಲ್ಲ; ಅದು ಅನೇಕ" ಎಂಬ ಸ್ಪಷ್ಟ ತಿಳಿವಳಿಕೆಯೊಂದಿಗೆ ದೇಶೀಯ ಸಾಂಪ್ರದಾಯಿಕ ಜ್ಞಾನ ಪರಂಪರೆಗಳ ಅಧ್ಯಯನಕ್ಕೆ ಅವಕಾಶವನ್ನು ಕಲ್ಪಿಸುವುದು;

(4) ಕರ್ನಾಟಕದ ಎಲ್ಲ ಅಲಕ್ಷಿತ ಗ್ರಾಮೀಣ ಸಮುದಾಯಗಳ ಹಾಗೂ ಬುಡಕಟ್ಟುಗಳ ಅಭಿವೃದ್ಧಿಗೆ ನೆರವಾಗುವುದು;

(5) ಜಾಗತೀಕರಣದ ಸವಾಲುಗಳನ್ನು ಸಮರ್ಥವಾಗಿ ಎದುರಿಸಲು ದೇಶೀಯ ಸಂಸ್ಕೃತಿಗಳನ್ನು ಬಲಪಡಿಸುವುದು;

(6) ವಿಶ್ವದಲ್ಲಿಯೇ ಇದು ಮೊದಲ ಜಾನಪದ ಅಧ್ಯಯನ ವಿಶ್ವವಿದ್ಯಾಲಯವಾಗಿರುವುದರಿಂದ ಎಲ್ಲ ದೇಶಗಳಿಗೆ, ಅದರಲ್ಲೂ ವಿಶೇಷವಾಗಿ, ಅಭಿವೃದ್ಧಿಶೀಲ ದೇಶಗಳಿಗೆ ಮಾದರಿಯಾಗುವಂಥ ರೀತಿಯಲ್ಲಿ ಈ ವಿಶ್ವವಿದ್ಯಾಲಯವನ್ನು ರೂಪಿಸುವುದು;

(7) ಕರ್ನಾಟಕದ ವಿವಿಧ ಪ್ರದೇಶಗಳಲ್ಲಿಯ ಎಲ್ಲ ಸಮುದಾಯಗಳ ಜಾನಪದವನ್ನು ವಿಸ್ತೃತ ಕ್ಷೇತ್ರಕಾರ್ಯದ ಮೂಲಕ ವೈಜ್ಞಾನಿಕವಾಗಿ ಸಂಗ್ರಹಿಸಿ, ಸಂಪಾದಿಸಿ ಪ್ರಕಟಿಸುವುದು;

(8) ಸಂಗ್ರಹಿಸಿದ ಜಾನಪದ ಸಾಮಗ್ರಿಯನ್ನು ವ್ಯವಸ್ಥಿತ ರೂಪದಲ್ಲಿ ಡಿಜಿಟಲ್ ವಿಧಾನದಿಂದ ಬಹುಮುಖೀ ದಾಖಲೀಕರಣವನ್ನು ಕೈಗೊಂಡು ಅದನ್ನು ಸಂರಕ್ಷಿಸುವುದು;

(9) ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಲಭ್ಯವಾಗುವ ಗ್ರಾಮೀಣ ಹಾಗೂ ಬುಡಕಟ್ಟು ಜೀವನದಲ್ಲಿ ಬಳಕೆಯಲ್ಲಿರುವ ವಸ್ತುಗಳನ್ನು, ಅವು ಕಣ್ಮರೆಯಾಗುವ ಮೊದಲೇ ಸಂಗ್ರಹಿಸುವುದು ಮತ್ತು ಅವುಗಳನ್ನು ಒಳಾಂಗಣ ಹಾಗೂ ಬಯಲು ವಸ್ತು ಸಂಗ್ರಹಾಲಯಗಳಲ್ಲಿ ವ್ಯವಸ್ಥಿತವಾಗಿ ಪ್ರದರ್ಶನ ಮಾಡುವುದು ಹಾಗೂ ಆ ಸ್ಥಳಗಳನ್ನು ಪ್ರವಾಸಿ ಆಕರ್ಷಣೆಯ ತಾಣವನ್ನಾಗಿ ರೂಪಿಸುವುದು;

(10) ಶಾಲೆ, ಕಾಲೇಜು ಹಾಗೂ ಉನ್ನತ ಶಿಕ್ಷಣಕೇಂದ್ರಗಳಲ್ಲಿ ಜಾನಪದವನ್ನು ಒಂದು ಕಲಿಕೆಯ ವಿಷಯವಾಗಿ ಅಳವಡಿಸುವುದು ಹಾಗೂ ವಿಶ್ವವಿದ್ಯಾಲಯದ ಮಟ್ಟದಲ್ಲಿ ಸಂಶೋಧನೆ ನಡೆಸಲು ಅವಕಾಶವನ್ನು ಮಾಡಿಕೊಟ್ಟು ಪದವಿಗಳನ್ನು ಪ್ರದಾನ ಮಾಡುವುದು. ಹಾಗೆಯೇ ದೂರಶಿಕ್ಷಣದ ಮೂಲಕ ಆಸಕ್ತ ಜನರಿಗೆ ಶಿಕ್ಷಣವನ್ನು ನೀಡುವುದು;

(11) ಜಾನಪದವನ್ನು ಬಹು ಶಿಸ್ತೀಯ ಹಾಗೂ ಅಂತರಶಿಸ್ತೀಯ ನೆಲೆಗಳಲ್ಲಿ ಅಧ್ಯಯನ ಮಾಡುವುದು ಮತ್ತು ಉನ್ನತ ಮಟ್ಟಗಳಲ್ಲಿ ಸಂಶೋಧನೆಗೆ ಪ್ರೋತ್ಸಾಹವನ್ನು ನೀಡುವುದು;

(12) ಕರ್ನಾಟಕದ ವಿವಿಧ ಭಾಷೆಗಳ ಮತ್ತು ಸಮುದಾಯಗಳ ಜಾನಪದವನ್ನು ತೌಲನಿಕವಾಗಿ ಅಧ್ಯಯನ ಮಾಡುವುದು;

(13) ಕರ್ನಾಟಕದ ಜಾನಪದವನ್ನು ಭಾರತದ ಇತರ ರಾಜ್ಯಗಳ ಜಾನಪದದೊಡನೆ ತೌಲನಿಕವಾಗಿ ಅಧ್ಯಯನ ನಡೆಸಲು ಉತ್ತೇಜಿಸುವುದು. ಅದರಂತೆಯೇ ದಕ್ಷಿಣ ಏಷಿಯಾ ಹಾಗೂ ವಿಶ್ವದ ಇತರ ದೇಶಗಳ, ಅದರಲ್ಲೂ ವಿಶೇಷವಾಗಿ, ಅಭಿವೃದ್ಧಿ ಶೀಲ ದೇಶಗಳ ಜಾನಪದ ಅಧ್ಯಯನವನ್ನು ನಡೆಸಲು ಪ್ರೋತ್ಸಾಹ ನೀಡುವುದು. ಈ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ ಕರ್ನಾಟಕದ, ಭಾರತದ ಮತ್ತು ವಿಶ್ವದ ಇತರ ವಿಶ್ವವಿದ್ಯಾಲಯಗಳು / ಸಂಶೋಧನ ಸಂಸ್ಥೆಗಳೊಡನೆ ಒಡಂಬಡಿಕೆ ಮಾಡಿಕೊಳ್ಳುವುದು;

(14) ಕರ್ನಾಟಕದ ಜಾನಪದವನ್ನು ಮತ್ತು ಮಹತ್ವಪೂರ್ಣ ಜಾನಪದ ಅಧ್ಯಯನಗಳನ್ನು ಇಂಗ್ಲಿಷ್, ಹಿಂದಿ ಮತ್ತು ಇತರ ಭಾರತೀಯ ಹಾಗೂ ವಿದೇಶಿ ಭಾಷೆಗಳಿಗೆ ಅನುವಾದ ಮಾಡುವುದು. ಹಾಗೆಯೇ ಭಾರತದ ಮತ್ತು ವಿಶ್ವದ ಇತರ ಭಾಷೆಗಳಲ್ಲಿರುವ ಜಾನಪದ ಪಠ್ಯಗಳನ್ನು ಹಾಗೂ ಮಹತ್ವದ ಅಧ್ಯಯನಗಳನ್ನು ಕನ್ನಡಕ್ಕೆ ಅನುವಾದ ಮಾಡುವುದು;

(15) ವಿಶ್ವವಿದ್ಯಾಲಯವು ಜಾನಪದ ಅಧ್ಯಯನದ ವೈವಿಧ್ಯತೆಯ ಪ್ರಕಟಣೆಗಾಗಿ ಪ್ರಸಾರಾಂಗವನ್ನು ಸ್ಥಾಪಿಸುವುದು. ಪ್ರಸಾರಾಂಗದ ಮೂಲಕ ಪುಸ್ತಕಗಳ ಪ್ರಕಟಣೆ, ವಾರ್ತಾಪತ್ರಗಳು, ಸಂಶೋಧನಾ ಪತ್ರಿಕೆಗಳು ಮೊದಲಾದ ಪ್ರಕಟಣೆಗಳನ್ನು ಹೊರತರುವುದು. ಬಹುಮಾಧ್ಯಮದ ಮೂಲಕ ಜಾನಪದ ಕಲೆ ಮತ್ತು ಸಂಸ್ಕೃತಿಯನ್ನು ಪ್ರಚಾರ ಮಾಡುವುದು. ಜಾನಪದದ ಬಗ್ಗೆ ಜನಸಾಮಾನ್ಯರಲ್ಲಿ ತಿಳುವಳಿಕೆಯನ್ನು ಮೂಡಿಸಲು ವಿದ್ವಾಂಸರು ಮತ್ತು ಕಲಾವಿದರಿಂದ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸುವುದು;

(16) ಸ್ವಾವಲಂಬಿ ಮತ್ತು ಸ್ವ ಉದ್ಯೋಗ ಕಲ್ಪಿಸುವ ಗುಡಿಕೈಗಾರಿಕೆಗಳ ಹಾಗೂ ವೃತ್ತಿ ಕೌಶಲಗಳ ಸಂವರ್ಧನೆಗೆ ಪ್ರಯತ್ನವನ್ನು ನಡೆಸುವುದು;

(17) ಪಾರಂಪರಿಕ ಕಸಬುದಾರಿಕೆಯ ಉತ್ಪನ್ನಗಳಿಗೆ ಮಾರುಕಟ್ಟೆಯನ್ನು ಕಲ್ಪಿಸಿಕೊಡುವುದು ಮತ್ತು ಆರ್ಥಿಕ ಭದ್ರತೆಯನ್ನು ಒದಗಿಸುವುದು;

(18) ಜಾನಪದದಲ್ಲಿರಬಹುದಾದ ಎಲ್ಲ ಅಸಂಗತ, ಅವೈಚಾರಿಕ, ಅಮಾನವೀಯ ಹಾಗೂ ಅವೈಜ್ಞಾನಿಕ ಅಂಶಗಳನ್ನು ನಿವಾರಿಸಿ ಸಮಾಜದ ಸ್ವಾಸ್ಥ್ಯ ಹಾಗೂ ಸಾಮರಸ್ಯವನ್ನು ಸಾಧಿಸಲು ಅವಶ್ಯಕವಾದ ಶಿಕ್ಷಣವನ್ನು ನೀಡುವುದು;

(19) ಅಲಕ್ಷಿತ ಸಮುದಾಯದವರಿಗೆ ಆಧುನಿಕ ಶಿಕ್ಷಣವನ್ನು ನೀಡುವ ಮೂಲಕ ಅವರನ್ನು ಸಮಾಜದ ಮುಖ್ಯವಾಹಿನಿಗೆ ತಂದು ಅವರಲ್ಲಿ ಆತ್ಮಸ್ಥೈರ್ಯವನ್ನು ಉಂಟುಮಾಡುವುದು. ಅನೌಪಚಾರಿಕ ಶಿಕ್ಷಣ, ಸಮೂಹ ಸಂವಹನ ಹಾಗೂ ಗ್ರಾಮೀಣಾಭಿವೃದ್ಧಿ ಚಟುವಟಿಕೆಗಳಲ್ಲಿ ಜಾನಪದವನ್ನು ಪೂರ್ಣಪ್ರಮಾಣದಲ್ಲಿ ಬಳಸಿಕೊಳ್ಳುವ ಉದ್ದೇಶಕ್ಕಾಗಿ ಒಂದು ಪ್ರತ್ಯೇಕ ಅಭಿವೃದ್ಧಿ ಅಧ್ಯಯನ ವಿಭಾಗವನ್ನು ತೆರೆಯುವುದು;

(20) ಕಾಲಕಾಲಕ್ಕೆ ಜಾನಪದ ಅಧ್ಯಯನ ವಿಷಯಕ್ಕೆ ಪ್ರಸ್ತುತ ಎನಿಸುವ ಯೋಜನೆಗಳನ್ನು ರೂಪಿಸಿ ಅವುಗಳನ್ನು ಕಾರ್ಯಗತಗೊಳಿಸುವುದು.

**5. ವಿಶ್ವವಿದ್ಯಾಲಯದ ಅಧಿಕಾರಗಳು.**– ವಿಶ್ವವಿದ್ಯಾಲಯವು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(1) ಪದವಿಗಳು, ಡಿಪ್ಲೊಮಾ ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ನೀಡಲು ಏರ್ಪಾಡು ಮಾಡುವುದು;

(2) ನಿಯಮಿಸಬಹುದಾದ ಅಂಥ ಷರತ್ತುಗಳಿಗೆ ಒಳಪಟ್ಟು ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದ ಯಾವುದೇ ಇತರ ಯಾವುದೇ ಸಂಸ್ಥೆ ಅಥವಾ ಕೇಂದ್ರದಲ್ಲಿ ಸಂಶೋಧನೆಯನ್ನು ಪೂರೈಸಿದ ವ್ಯಕ್ತಿಗಳಿಗೆ ಪದವಿಗಳು, ಡಿಪ್ಲೊಮಾ ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರದಾನ ಮಾಡುವುದು;

(3) ನಿಯಮಿಸಬಹುದಾದ ಅಂಥ ರೀತಿಯಲ್ಲಿ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು ಗೌರವ ಪದವಿಗಳು ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರದಾನ ಮಾಡುವುದು;

(4) ವಿದ್ಯಾರ್ಥಿನಿಲಯಗಳ ಮೇಲ್ವಿಚಾರಣೆಯನ್ನು ನಡೆಸುವುದು ಮತ್ತು ನಿಯಂತ್ರಿಸುವುದು ಹಾಗೂ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಲ್ಲಿ ಶಿಸ್ತು ಮೂಡುವಂತೆ ಮಾಡುವುದು ಮತ್ತು ಅವರ ಆರೋಗ್ಯ ಮತ್ತು ಸಾಮಾನ್ಯ ಕ್ಷೇಮಾಭಿವೃದ್ಧಿಗೆ ಉತ್ತೇಜನ ನೀಡಲು ವ್ಯವಸ್ಥೆಗಳನ್ನು ಮಾಡುವುದು;

(5) ವ್ಯಕ್ತಿಗಳಿಗೆ ನೀಡುವ ಯಾವುದೇ ಪದವಿ, ಡಿಪ್ಲೊಮಾ ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ತಡೆಹಿಡಿಯಬಹುದಾದ ಷರತ್ತುಗಳನ್ನು ನಿಯಮಿಸುವುದು;

(6) ಕಾಲಕಾಲಕ್ಕೆ ನಿಯಮಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ, ವಿಶ್ವವಿದ್ಯಾಲಯವು ಹೊಂದಿರುವಂಥದೇ ಉದ್ದೇಶಗಳು ಮತ್ತು ಗುರಿಗಳ ಉತ್ತೇಜನೆಯನ್ನು ದೃಷ್ಟಿಯಲ್ಲಿರಿಸಿಕೊಂಡಿರುವ ಇತರ ಯಾವುದೇ ವಿಶ್ವವಿದ್ಯಾಲಯ, ಪ್ರಾಧಿಕಾರ ಅಥವಾ ಸಂಘ ಅಥವಾ ಇತರ ಸಾರ್ವಜನಿಕ ಅಥವಾ ಖಾಸಗಿ ನಿಕಾಯದೊಂದಿಗೆ ಸಹಕರಿಸುವುದು;

(7) ಸಂಶೋಧನೆ ಮತ್ತು ಪ್ರಸಾರಾಂಗದ ಸಲುವಾಗಿ ವಿಶ್ವವಿದ್ಯಾಲಯದ ಗ್ರಂಥಾಲಯಗಳು, ಸಂಶೋಧನಾ ಕೇಂದ್ರಗಳು, ವಸ್ತು ಸಂಗ್ರಹಾಲಯಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು;

(8) ನಿಯಮಿಸಲಾದ ರೀತಿಯಲ್ಲಿ ಪ್ರವಾಸೀ ಸಂಶೋಧನಾ ವೇತನಗಳು, ವಿದ್ಯಾರ್ಥಿ ವೇತನಗಳು, ಪದಕಗಳು ಮತ್ತು ಬಹುಮಾನಗಳೂ ಸೇರಿದಂತೆ ಸಂಶೋಧನ ವೇತನಗಳನ್ನು ಪ್ರಾರಂಭಿಸುವುದು ಮತ್ತು ಅವುಗಳನ್ನು ನೀಡುವುದು;

(9) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗಾಗಿ ವಿದ್ಯಾರ್ಥಿನಿಲಯಗಳನ್ನು ಮತ್ತು ವಿಶ್ವವಿದ್ಯಾಲಯದ ಸಿಬ್ಬಂದಿಗಾಗಿ ವಸತಿಗಳನ್ನು ಸ್ಥಾಪಿಸುವುದು, ನಿರ್ವಹಿಸುವುದು ಅಥವಾ ಮಾನ್ಯತೆ ನೀಡುವುದು ಮತ್ತು ಅಂಥ ಯಾವುದೇ ಮಾನ್ಯತೆಗಳನ್ನು ಹಿಂತೆಗೆದುಕೊಳ್ಳುವುದು;

(10) ನಿಯಮಿಸಬಹುದಾದಂತೆ ಶುಲ್ಕವನ್ನು ನಿಗದಿಪಡಿಸುವುದು ಮತ್ತು ಅಂಥ ಶುಲ್ಕವನ್ನು ಕೇಳುವುದು ಹಾಗೂ ಸ್ವೀಕರಿಸುವುದು ಮತ್ತು ವಿಶ್ವವಿದ್ಯಾಲಯದ ದತ್ತಿಗಳು ಮತ್ತು ಇತರ ಸ್ವತ್ತುಗಳು ಹಾಗೂ ನಿಧಿಗಳನ್ನು ಧಾರಣ ಮಾಡುವುದು ಮತ್ತು ನಿರ್ವಹಿಸುವುದು;

(11) ಸರ್ಕಾರದ ಅನುಮೋದನೆಯೊಂದಿಗೆ ವಿಶ್ವವಿದ್ಯಾಲಯದ ಉದ್ದೇಶಗಳಿಗಾಗಿ ವಿಶ್ವವಿದ್ಯಾಲಯದ ಸ್ವತ್ತಿನ ಭದ್ರತೆಯ ಮೇಲೆ ಹಣವನ್ನು ಸಾಲವಾಗಿ ಪಡೆಯುವುದು;

(12) ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳನ್ನು ಉತ್ತೇಜಿಸುವ ಉದ್ದೇಶಕ್ಕಾಗಿ ಅವುಗಳ ಅಡಿಯಲ್ಲಿ ಬರುವ ಯಾವುದೇ ಸಂಸ್ಥೆಯ ವ್ಯವಸ್ಥಾಪನೆಯನ್ನು ವಹಿಸಿಕೊಳ್ಳುವುದು ಮತ್ತು ಅದರ ಎಲ್ಲ ಹಕ್ಕುಗಳು ಮತ್ತು ದಾಯಿತ್ವಗಳನ್ನು ವಶಕ್ಕೆ ತೆಗೆದುಕೊಳ್ಳುವುದೂ ಸೇರಿದಂತೆ ಇತರ ನಿಕಾಯಗಳು ಅಥವಾ ವ್ಯಕ್ತಿಗಳೊಂದಿಗೆ ಕರಾರು ಮಾಡಿಕೊಳ್ಳುವುದು;

(13) ಈ ಅಧ್ಯಾದೇಶದ ಉದ್ದೇಶಗಳಿಗಾಗಿ ಚರ ಮತ್ತು ಸ್ಥಿರ ಸ್ವತ್ತುಗಳೆರಡನ್ನು ಆರ್ಜಿಸುವುದು ಮತ್ತು ಧಾರಣ ಮಾಡುವುದು ಮತ್ತು ವಿಶ್ವವಿದ್ಯಾಲಯದ ಉದ್ದೇಶಗಳಿಗಾಗಿ ಇದರಿಂದ ಆರ್ಜಿಸಿದ ಸ್ಥಿರ ಸ್ವತ್ತನ್ನು ಗುತ್ತಿಗೆಗೆ ಕೊಡುವುದು ಅಥವಾ ಚರ ಸ್ವತ್ತನ್ನು ಮಾರಾಟ ಮಾಡುವುದು ಅಥವಾ ಅನ್ಯಥಾ ವರ್ಗಾವಣೆ ಮಾಡುವುದು ಮತ್ತು ಕರಾರು ಮಾಡಿಕೊಳ್ಳುವುದಕ್ಕೆ ಮತ್ತು ಅವಶ್ಯವಾದ ಇತರ ಎಲ್ಲ ಕಾರ್ಯಗಳನ್ನೂ ಮಾಡುವುದು;

(14) ವಿಶ್ವವಿದ್ಯಾಲಯದಲ್ಲಿ ನಿಹಿತವಾಗಿರಬಹುದಾದ ಅಥವಾ ಅದು ಆರ್ಜಿಸಿರಬಹುದಾದ ಯಾವುದೇ ಸ್ಥಿರ ಸ್ವತ್ತನ್ನು, ಸರ್ಕಾರದ ಪೂರ್ವಾನುಮೋದನೆಯನ್ನು ಪಡೆದುಕೊಳ್ಳದೆ ಗುತ್ತಿಗೆ, ಮಾರಾಟ ಅಥವಾ ಅನ್ಯಥಾ ವರ್ಗಾವಣೆ ಮಾಡತಕ್ಕದ್ದಲ್ಲ.

**6. ವಿಶ್ವವಿದ್ಯಾಲಯಕ್ಕೆ ಪ್ರವೇಶ.**–(1) ಈ ಅಧ್ಯಾದೇಶದ ಮತ್ತು ಪರಿನಿಯಮಗಳ ಉಪಬಂಧಗಳಿಗೆ ಒಳಪಟ್ಟು ವಿಶ್ವವಿದ್ಯಾಲಯವು ಎಲ್ಲ ವ್ಯಕ್ತಿಗಳ ಪ್ರವೇಶಕ್ಕೆ ಮುಕ್ತವಾಗಿರತಕ್ಕದ್ದು.

(2) (1)ನೇ ಉಪಪ್ರಕರಣದಲ್ಲಿರುವುದಾವುದೂ,–

(ಎ) ನಿಯಮಿಸಲಾದ ಶೈಕ್ಷಣಿಕ ವಿದ್ಯಾರ್ಹತೆಯನ್ನು ಅಥವಾ ಗುಣಮಟ್ಟವನ್ನು ಹೊಂದಿರದ ಯಾವೊಬ್ಬ ವ್ಯಕ್ತಿಗೆ ಯಾವುದೇ ಅಧ್ಯಯನ ಕ್ರಮಕ್ಕೆ ಪ್ರವೇಶ ನೀಡಲು;

(ಬಿ) ಪದವಿ, ಡಿಪ್ಲೊಮಾ ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಯನ್ನು ನೀಡಲು ಅಗತ್ಯವಿರುವ ಕನಿಷ್ಠ ಮಟ್ಟಕ್ಕಿಂತ ಕಡಿಮೆಯ ಶೈಕ್ಷಣಿಕ ಪ್ರಗತಿಯನ್ನು ತೋರಿಸುವ ಯಾವೊಬ್ಬ ವಿದ್ಯಾರ್ಥಿಯನ್ನು ವಿಶ್ವವಿದ್ಯಾಲಯದ ಹಾಜರಿಪಟ್ಟಿಯಲ್ಲಿ ಉಳಿಸಿಕೊಳ್ಳಲು; ಅಥವಾ

(ಸಿ) ವಿಶ್ವವಿದ್ಯಾಲಯದ ಹಿತಾಸಕ್ತಿಗೆ ಅಥವಾ ಇತರ ವಿದ್ಯಾರ್ಥಿಗಳು ಮತ್ತು ಬೋಧಕರ ಹಕ್ಕುಗಳು ಮತ್ತು ವಿಶೇಷಾಧಿಕಾರಗಳಿಗೆ ಪ್ರತಿಕೂಲವಾದ ನಡತೆಯುಳ್ಳ ಯಾವೊಬ್ಬ ವ್ಯಕ್ತಿಗೆ ಪ್ರವೇಶ ನೀಡಲು ಅಥವಾ ಯಾವೊಬ್ಬ ವಿದ್ಯಾರ್ಥಿಯನ್ನು ಉಳಿಸಿಕೊಳ್ಳಲು

– ವಿಶ್ವವಿದ್ಯಾಲಯವನ್ನು ಅಗತ್ಯಪಡಿಸತಕ್ಕದ್ದಲ್ಲ.

**7. ನಿರ್ದೇಶನಗಳನ್ನು ನೀಡಲು ಅಧಿಕಾರ.–** ಕುಲಾಧಿಪತಿಯು, ತಾನಾಗಿ ಅಥವಾ ಸರ್ಕಾರದ ಶಿಫಾರಸಿನ ಮೇಲೆ, ವಿಶ್ವವಿದ್ಯಾಲಯದ ಆಡಳಿತ ಮತ್ತು ಶೈಕ್ಷಣಿಕ ಕಾರ್ಯನಿರ್ವಹಣೆಯ ಮತ್ತು ವಿಶೇಷವಾಗಿ ಶಾಂತಿ ಮತ್ತು ನೆಮ್ಮದಿಯನ್ನು ಕಾಯ್ದುಕೊಂಡುಬರುವ ದೃಷ್ಟಿಯಿಂದ ಹಾಗೂ ಸ್ವತ್ತು ಮತ್ತು ಹಣಕಾಸು ವ್ಯವಸ್ಥೆಯನ್ನು ಸಂರಕ್ಷಿಸುವುದಕ್ಕಾಗಿ ಅವಶ್ಯಕ ಅಥವಾ ಯುಕ್ತವಾಗಬಹುದಾದ ಅಂಥ ನಿರ್ದೇಶನಗಳನ್ನು ನೀಡಬಹುದು.

**8. ವಿಶ್ವವಿದ್ಯಾಲಯದ ಆದೇಶಗಳನ್ನು ರದ್ದುಗೊಳಿಸಲು ಅಧಿಕಾರ.–** ಸರ್ಕಾರವು, ಅಧಿಕೃತ ರಾಜ್ಯಪತ್ರದಲ್ಲಿ ಆದೇಶವನ್ನು ಪ್ರಕಟಿಸುವ ಮೂಲಕ ವಿಶ್ವವಿದ್ಯಾಲಯದ ಯಾವುದೇ ಆದೇಶ, ಅಧಿಸೂಚನೆ, ನಿರ್ಣಯ ಅಥವಾ ಯಾವುದೇ ವ್ಯವಹರಣೆಗಳು, ಈ ಅಧ್ಯಾದೇಶಅಥವಾ ಪರಿನಿಯಮಗಳು, ವಿನಿಯಮಗಳು ಅಥವಾ ಅಧ್ಯಾದೇಶಗಳ ಉಪಬಂಧಗಳಿಗೆ ಸುಸಂಗತವಾಗಿಲ್ಲವೆಂದು ಅಥವಾ ಅನ್ಯಥಾ ಸರ್ಕಾರದ ಕಾರ್ಯನೀತಿಗೆ ಅಸಂಗತವಾಗಿದೆಯೆಂದು ಅಭಿಪ್ರಾಯಪಟ್ಟಲ್ಲಿ ಅವುಗಳನ್ನು ರದ್ದುಗೊಳಿಸುವುದು.

## ಅಧ್ಯಾಯ –III

## ವಿಶ್ವವಿದ್ಯಾಲಯದ ಅಧಿಕಾರಿಗಳು

**9. ವಿಶ್ವವಿದ್ಯಾಲಯದ ಅಧಿಕಾರಿಗಳು.–** ವಿಶ್ವವಿದ್ಯಾಲಯವು ಈ ಮುಂದಿನ ಅಧಿಕಾರಿಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:

(1) ಕುಲಾಧಿಪತಿಯವರು;

(2) ಸಹ–ಕುಲಾಧಿಪತಿಯವರು;

(3) ಕುಲಪತಿಯವರು;

(4) ಕುಲಸಚಿವರು;

(5) ಕುಲಸಚಿವರು (ಮೌಲ್ಯಮಾಪನ);

(6) ಹಣಕಾಸು ಅಧಿಕಾರಿ;

(7) ವ್ಯಾಸಂಗ ವಿಭಾಗಗಳ ಡೀನರು;

(8) ನಿರ್ದೇಶಕರು, ಅಧ್ಯಯನಾಂಗ, ಯೋಜನೆ, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ ಮಂಡಳಿ; ಮತ್ತು

(9) ವಿಶ್ವವಿದ್ಯಾಲಯದ ಅಧಿಕಾರಿಗಳೆಂದು ಪರಿನಿಯಮಗಳಿಂದ ಘೋಷಿತರಾಗ ಬಹುದಾದ ಅಂಥ ಇತರ ಅಧಿಕಾರಿಗಳು.

**10. ಕುಲಾಧಿಪತಿಯವರು.–** (1) ಕರ್ನಾಟಕದ ರಾಜ್ಯಪಾಲರು ವಿಶ್ವವಿದ್ಯಾಲಯದ ಕುಲಾಧಿಪತಿಯಾಗಿರತಕ್ಕದ್ದು. ಅವರು ತಮ್ಮ ಪದದ ಆಧಾರದಿಂದ ವಿಶ್ವವಿದ್ಯಾಲಯದ ಮುಖ್ಯಸ್ಥರಾಗಿರತಕ್ಕದ್ದು ಮತ್ತು ಅವರು ಹಾಜರಾಗಿದ್ದಾಗ, ವಿಶ್ವವಿದ್ಯಾಲಯದ ಯಾವುದೇ ಘಟಿಕೋತ್ಸವದ ಅಧ್ಯಕ್ಷರಾಗಿರತಕ್ಕದ್ದು ಮತ್ತು ಪದವಿಗಳು, ಡಿಪ್ಲೊಮಾ ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಅವುಗಳನ್ನು ಸ್ವೀಕರಿಸಲು ಹಕ್ಕುಳ್ಳ ವ್ಯಕ್ತಿಗಳಿಗೆ ಪ್ರದಾನ ಮಾಡತಕ್ಕದ್ದು.

(2) ಪ್ರಾಧಿಕಾರಗಳಿಗೆ ವ್ಯಕ್ತಿಗಳನ್ನು ನಾಮನಿರ್ದೇಶನ ಮಾಡಲು ಕುಲಾಧಿಪತಿಯವರಿಗೆ ಅಧಿಕಾರವನ್ನು ಪ್ರದತ್ತಗೊಳಿಸಿರುವಲ್ಲಿ ಕುಲಾಧಿಪತಿಯವರು ಅವಶ್ಯಕವಿರುವಷ್ಟರಮಟ್ಟಿಗೆ ಸಾಕಷ್ಟು ಪ್ರಾತಿನಿಧ್ಯ ಪಡೆಯದ ಹಿತಾಸಕ್ತಿಗಳನ್ನು ಪ್ರತಿನಿಧಿಸಲು ವ್ಯಕ್ತಿಗಳನ್ನು ನಾಮನಿರ್ದೇಶಿಸತಕ್ಕದ್ದು.

(3) ಕುಲಾಧಿಪತಿಯವರು ಸ್ವತಃ ತಾವಾಗಿಯೇ ಆಗಲಿ ಅಥವಾ ಅರ್ಜಿಯ ಮೇಲಾಗಲೀ ಯಾವುದೇ ವ್ಯವಹರಣೆಗಳ ಸಂಬಂಧದಲ್ಲಿ ಅಂಥ ವ್ಯವಹರಣೆಗಳ ಸಕ್ರಮತೆ ಅಥವಾ ಯಥಾರ್ಥತೆ, ಕೈಗೊಳ್ಳಲಾದ ಯಾವುದೇ ತೀರ್ಮಾನ ಅಥವಾ ಅದರಲ್ಲಿ ಜಾರಿ ಮಾಡಲಾದ ಆದೇಶದ ಕಾನೂನು ಸಮ್ಮತತೆ ಅಥವಾ ಔಚಿತ್ಯದ ಬಗ್ಗೆ ತಾವೇ ಮನದಟ್ಟು ಮಾಡಿಕೊಳ್ಳಲು ವಿಶ್ವವಿದ್ಯಾಲಯದ ಯಾವೊಬ್ಬ ಅಧಿಕಾರಿ ಅಥವಾ ಯಾವುದೇ ಪ್ರಾಧಿಕಾರದ ದಾಖಲೆಗಳನ್ನು ತರಿಸಿಕೊಂಡು ಪರೀಕ್ಷಿಸಬಹುದು ಮತ್ತು ಯಾವುದೇ ಸಂದರ್ಭದಲ್ಲಿ ಅಂಥ ಯಾವುದೇ ತೀರ್ಮಾನ ಅಥವಾ ಆದೇಶವನ್ನು ಮಾರ್ಪಾಟುಗೊಳಿಸಬೇಕು, ರದ್ದುಗೊಳಿಸಬೇಕು, ಪರಿಷ್ಕರಣಗೊಳಿಸಬೇಕು ಅಥವಾ ಪುನರ್ ಪರಿಶೀಲನೆಗಾಗಿ ಹಿಂದಕ್ಕೆ ಕಳುಹಿಸಬೇಕೆಂದು ಕುಲಾಧಿಪತಿಯವರಿಗೆ ತೋರಿದರೆ ಅವರು ತದನುಸಾರವಾಗಿ ಆದೇಶಗಳನ್ನು ಜಾರಿ ಮಾಡಬಹುದು:

ಪರಂತು, ಈ ಪ್ರಕರಣದ ಅಡಿಯಲ್ಲಿ ಅಧಿಕಾರಗಳನ್ನು ಚಲಾಯಿಸುವುದಕ್ಕಾಗಿ, ಪ್ರತಿಯೊಂದು ಅರ್ಜಿಯನ್ನು, ಅರ್ಜಿಯ ಸಂಬಂಧದಲ್ಲಿನ ವ್ಯವಹರಣೆ, ತೀರ್ಮಾನ ಅಥವಾ ಆದೇಶವನ್ನು ಅರ್ಜಿದಾರರಿಗೆ ತಿಳಿಸಿದ ದಿನಾಂಕದಿಂದ ಮೂರು ತಿಂಗಳೊಳಗೆ ಕುಲಾಧಿಪತಿಯವರಿಗೆ ಸಲ್ಲಿಸತಕ್ಕದ್ದು:

ಮತ್ತು ಪರಂತು, ಯಾವೊಬ್ಬ ವ್ಯಕ್ತಿಗೆ ಪ್ರತಿಕೂಲವಾದ ಯಾವುದೇ ಆದೇಶವನ್ನು ಅಂಥ ವ್ಯಕ್ತಿಗೆ ತನ್ನ ಮನವಿಯನ್ನು ಸಲ್ಲಿಸಲು ಅವಕಾಶವನ್ನು ನೀಡಿದ್ದ ಹೊರತು, ಜಾರಿ ಮಾಡತಕ್ಕದ್ದಲ್ಲ.

**11. ಪರಿಶೀಲನೆ.–(1)** ಕುಲಾಧಿಪತಿಯವರು ತಾವು ನಿರ್ದೇಶಿಸಬಹುದಾದಂಥ ವ್ಯಕ್ತಿ ಅಥವಾ ವ್ಯಕ್ತಿಗಳಿಂದ, ವಿಶ್ವವಿದ್ಯಾಲಯ, ಅದರ ಕಟ್ಟಡಗಳು, ವಿಶ್ವವಿದ್ಯಾಲಯದ ಗ್ರಂಥಾಲಯಗಳು, ಸಂಗ್ರಹಾಲಯಗಳು ಮತ್ತು ಉಪಕರಣಗಳು ಹಾಗೂ ವಿಶ್ವವಿದ್ಯಾಲಯದಿಂದ ನಿರ್ವಹಿಸಲಾದ ಅಥವಾ ಮಾನ್ಯತೆ

ಪಡೆದ ಯಾವುದೇ ಸಂಸ್ಥೆಗಳು ಮತ್ತು ವಿಶ್ವವಿದ್ಯಾಲಯದಿಂದ ನಡೆಸಲಾದ ಅಥವಾ ಮಾಡಲಾದ ಸಂಶೋಧನೆ, ಬೋಧನೆ ಮತ್ತು ಇತರೆ ಕೆಲಸದ ಪರಿಶೀಲನೆ ನಡೆಸುವಂತೆ ಮಾಡಲು ಅಥವಾ ವಿಚಾರಣೆ ಮಾಡುವಂತೆ ಮಾಡಲು ಹಕ್ಕನ್ನು ಹೊಂದಿರತಕ್ಕದ್ದು ಹಾಗೂ ವಿಶ್ವವಿದ್ಯಾಲಯಕ್ಕೆ ಸಂಬಂಧಿಸಿದ ಯಾವುದೇ ವಿಷಯದ ಬಗ್ಗೆ ವಿಚಾರಣೆ ನಡೆಸುವಂತೆ ಮಾಡತಕ್ಕದ್ದು. ಕುಲಾಧಿಪತಿಯವರು, ಪ್ರತಿಯೊಂದು ಸಂದರ್ಭದಲ್ಲೂ ಅಂಥ ಪರಿಶೀಲನೆ ಅಥವಾ ವಿಚಾರಣೆ ನಡೆಸುವ ತಮ್ಮ ಆಶಯದ ಬಗ್ಗೆ ವಿಶ್ವವಿದ್ಯಾಲಯಕ್ಕೆ ನೋಟೀಸನ್ನು ನೀಡತಕ್ಕದ್ದು ಮತ್ತು ವಿಶ್ವವಿದ್ಯಾಲಯವು ಅಲ್ಲಿ ಪ್ರಾತಿನಿಧ್ಯ ಪಡೆಯಲು ಹಕ್ಕುಳ್ಳದ್ದಾಗಿರತಕ್ಕದ್ದು.

(2) ಕುಲಾಧಿಪತಿಯವರು, ಅಂಥ ಪರಿಶೀಲನೆ ಅಥವಾ ವಿಚಾರಣೆಯ ಪರಿಣಾಮಗಳ ಸಂಬಂಧದಲ್ಲಿ ತಮ್ಮ ಅಭಿಪ್ರಾಯಗಳನ್ನು ಸಿಂಡಿಕೇಟಿಗೆ ತಿಳಿಸತಕ್ಕದ್ದು ಮತ್ತು ಅದರ ಮೇಲಣ ಸಿಂಡಿಕೇಟ್‌ನ ಅಭಿಪ್ರಾಯವನ್ನು ಖಚಿತಪಡಿಸಿಕೊಂಡ ತರುವಾಯ ಕೈಗೊಳ್ಳಬೇಕಾದ ಕ್ರಮದ ಬಗ್ಗೆ ವಿಶ್ವವಿದ್ಯಾಲಯಕ್ಕೆ ಸಲಹೆಯನ್ನು ನೀಡಿ ಅಂಥ ಕ್ರಮವನ್ನು ಕೈಗೊಳ್ಳುವುದಕ್ಕೆ ಕಾಲಮಿತಿಯನ್ನು ನಿಗದಿಪಡಿಸಬಹುದು.

(3) ಸಿಂಡಿಕೇಟ್ ಅಂಥ ಪರಿಶೀಲನೆ ಅಥವಾ ವಿಚಾರಣೆಯ ಫಲಿತಾಂಶಗಳ ಬಗ್ಗೆ ತಾನು ತೆಗೆದುಕೊಳ್ಳಬೇಕೆಂದು ಉದ್ದೇಶಿಸಲಾದ ಅಥವಾ ತೆಗೆದುಕೊಳ್ಳಲಾದ ಕ್ರಮ, ಯಾವುದಾದರೂ ಇದ್ದಲ್ಲಿ, ಆ ಬಗ್ಗೆ ಕುಲಾಧಿಪತಿಯವರಿಗೆ ವರದಿ ಸಲ್ಲಿಸತಕ್ಕದ್ದು. ಅಂಥ ವರದಿಯನ್ನು ಕುಲಾಧಿಪತಿಯವರು ನಿರ್ದೇಶಿಸಬಹುದಾದ ಅಂಥ ಕಾಲದೊಳಗೆ ಸಲ್ಲಿಸತಕ್ಕದ್ದು.

(4) (2)ನೇ ಉಪಪ್ರಕರಣದ ಅಡಿಯಲ್ಲಿ ನಿಗದಿಪಡಿಸಬಹುದಾದ ಕಾಲಮಿತಿಯೊಳಗೆ ಸಿಂಡಿಕೇಟ್, ಕುಲಾಧಿಪತಿಯವರಿಗೆ ಸಮಾಧಾನವಾಗುವಂತೆ ಕ್ರಮ ಕೈಗೊಳ್ಳದಿರುವಲ್ಲಿ, ಕುಲಾಧಿಪತಿಯವರು, ಸಿಂಡಿಕೇಟ್‌ನಿಂದ ಸಲ್ಲಿಸಲಾದ ವಿವರಣೆ ಅಥವಾ ಮಾಡಿಕೊಳ್ಳಲಾದ ಮನವಿಯನ್ನು ಪರಿಗಣಿಸಿದ ತರುವಾಯ, ತಾವು ಉಚಿತವೆಂದು ಭಾವಿಸಬಹುದಾದ ಅಂಥ ನಿರ್ದೇಶನಗಳನ್ನು ಹೊರಡಿಸಬಹುದು ಮತ್ತು ಸಿಂಡಿಕೇಟ್ ಅಂಥ ನಿರ್ದೇಶನಗಳನ್ನು ಪಾಲಿಸತಕ್ಕದ್ದು. ಸಿಂಡಿಕೇಟ್ ಅಂಥ ನಿರ್ದೇಶನಗಳನ್ನು ಪಾಲಿಸದಿದ್ದ ಪಕ್ಷದಲ್ಲಿ, ಕುಲಾಧಿಪತಿಯವರು ಅಂಥ ನಿರ್ದೇಶನಗಳನ್ನು ಪಾಲಿಸುವುದಕ್ಕಾಗಿ ಯಾವೊಬ್ಬ ವ್ಯಕ್ತಿ ಅಥವಾ ನಿಕಾಯವನ್ನು ನೇಮಿಸಲು ಅಧಿಕಾರವನ್ನು ಹೊಂದಿರತಕ್ಕದ್ದು ಮತ್ತು ಆ ಬಗೆಗಿನ ವೆಚ್ಚಗಳಿಗಾಗಿ ಅವಶ್ಯಕವಾಗಬಹುದಾದ ಅಂಥ ಆದೇಶಗಳನ್ನು ಹೊರಡಿಸಬಹುದು.

(5) ಕುಲಾಧಿಪತಿಯವರು, ಈ ಅಧ್ಯಾದೇಶದ ಮೂಲಕ ಅಥವಾ ಅದರ ಅಡಿಯಲ್ಲಿ ತಮಗೆ ಪ್ರದತ್ತಗೊಳಿಸಬಹುದಾದ ಅಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

**12. ಸಹ-ಕುಲಾಧಿಪತಿ.- (1)** ಕರ್ನಾಟಕ ರಾಜ್ಯದಲ್ಲಿ ಉನ್ನತ ಶಿಕ್ಷಣ ಖಾತೆಯ ಪ್ರಭಾರವನ್ನು ಹೊಂದಿರುವ ಸಚಿವರು, ವಿಶ್ವವಿದ್ಯಾಲಯದ ಸಹ ಕುಲಾಧಿಪತಿಯಾಗಿರತಕ್ಕದ್ದು.

(2) ಅವರು ಕುಲಾಧಿಪತಿಯವರ ಗೈರು ಹಾಜರಿಯಲ್ಲಿ ವಿಶ್ವವಿದ್ಯಾಲಯದ ಯಾವುದೇ ಘಟಿಕೋತ್ಸವದ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

**13. ಕುಲಪತಿ.-** (1) ಕುಲಪತಿಯು ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು.

(2) ಸರ್ಕಾರವು, ಕುಲಾಧಿಪತಿಯಿಂದ, ಸರ್ಕಾರದಿಂದ, ವಿಶ್ವವಿದ್ಯಾಲಯ ಅನುದಾನ ಆಯೋಗದಿಂದ ಮತ್ತು ಸಿಂಡಿಕೇಟ್‌ನಿಂದ ನಾಮನಿರ್ದೇಶಿತರಾದ ಒಬ್ಬೊಬ್ಬ ವ್ಯಕ್ತಿಯಿಂದ ಕೂಡಿದ ನಾಲ್ಕು ಮಂದಿ ಸದಸ್ಯರನ್ನು ಒಳಗೊಂಡ ಒಂದು ಶೋಧನಾ ಸಮಿತಿಯನ್ನು ರಚಿಸತಕ್ಕದ್ದು. ಸರ್ಕಾರವು, ನಾಲ್ಕು ಸದಸ್ಯರ ಪೈಕಿ ಒಬ್ಬರನ್ನು ಸಮಿತಿಯ ಅಧ್ಯಕ್ಷರನ್ನಾಗಿ ನೇಮಕ ಮಾಡತಕ್ಕದ್ದು. ಉನ್ನತ ಶಿಕ್ಷಣದ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ ಅಥವಾ ಸರ್ಕಾರದ ಉಪಕಾರ್ಯದರ್ಶಿಯ ದರ್ಜೆಗೆ ಕಡಿಮೆಯಲ್ಲದ ಅವರ ನಾಮನಿರ್ದೇಶಿತರು ಸಮಿತಿಯ ಸಂಚಾಲಕರಾಗಿರತಕ್ಕದ್ದು.

(3) ಸರ್ಕಾರದ, ವಿಶ್ವವಿದ್ಯಾಲಯದ ಅಥವಾ ವಿಶ್ವವಿದ್ಯಾಲಯದಿಂದ ಮನ್ನಣೆ ಪಡೆದ ಯಾವುದೇ ಕಾಲೇಜಿನ ಅಥವಾ ಸಂಸ್ಥೆಯ ವ್ಯವಹಾರಗಳೊಂದಿಗೆ ಸಂಬಂಧವಿರುವ ಯಾವೊಬ್ಬ ವ್ಯಕ್ತಿಯನ್ನೂ ಶೋಧನಾ ಸಮಿತಿಯ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡತಕ್ಕದ್ದಲ್ಲ.

(4) ಶೋಧನಾ ಸಮಿತಿಯು, ಖ್ಯಾತ ಜಾನಪದ ತಜ್ಞರಾದ ಮೂವರು ವ್ಯಕ್ತಿಗಳ ಒಂದು ಪಟ್ಟಿಯನ್ನು ಅಕಾರಾದಿ ಕ್ರಮದಲ್ಲಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಸರ್ಕಾರವು ಆ ಪಟ್ಟಿಯನ್ನು ತನ್ನ ಶಿಫಾರಸ್ಸಿನೊಂದಿಗೆ ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು. ಅವರು ಅರ್ಹತೆ, ಸಮದರ್ಶಿತ್ವ ಮತ್ತು ಸಾಮಾಜಿಕ ನ್ಯಾಯ ಇವುಗಳನ್ನು ಗಮನದಲ್ಲಿಟ್ಟುಕೊಂಡು ಆ ಪಟ್ಟಿಯಿಂದ ಒಬ್ಬ ವ್ಯಕ್ತಿಯನ್ನು ಕುಲಪತಿಯನ್ನಾಗಿ ನೇಮಕ ಮಾಡತಕ್ಕದ್ದು:

ಪರಂತು, ಕುಲಾಧಿಪತಿಯವರು ಅವಶ್ಯವೆಂದು ಪರಿಗಣಿಸಿದರೆ ಸರ್ಕಾರದ ಸಹಮತಿಯೊಡನೆ ಎರಡನೆಯ ಪಟ್ಟಿಯನ್ನು ತರಿಸಿಕೊಳ್ಳಬಹುದು ಮತ್ತು ಶೋಧನಾ ಸಮಿತಿಯು ಎರಡನೆಯ ಪಟ್ಟಿಯನ್ನು ಸಲ್ಲಿಸತಕ್ಕದ್ದು ಹಾಗೂ ಅದು ಅಂತಿಮವಾಗಿರತಕ್ಕದ್ದು.

(5) ಯಾವೊಬ್ಬ ವ್ಯಕ್ತಿಯ ವಯಸ್ಸು ಅರುವತ್ತೇಳು ವರ್ಷವನ್ನು ಮೀರಿದರೆ ಅಂತಹವರನ್ನು ಕುಲಪತಿಯನ್ನಾಗಿ ನೇಮಕಮಾಡತಕ್ಕದ್ದಲ್ಲ ಅಥವಾ ಅವರು ಆ ಪದವನ್ನು ಧಾರಣ ಮಾಡತಕ್ಕದ್ದಲ್ಲ.

(6) ಕುಲಪತಿಯವರು, ಕುಲಾಧಿಪತಿಯವರ ಇಷ್ಟಪರ್ಯಂತ ಮತ್ತು (5) ನೇ ಉಪಪ್ರಕರಣದ ಉಪಬಂಧಗಳಿಗೆ ಒಳಪಟ್ಟು ನಾಲ್ಕು ವರ್ಷಗಳ ಅವಧಿಯವರೆಗೆ ಪದಧಾರಣ ಮಾಡತಕ್ಕದ್ದು. ಅವರು ಎರಡನೇ ಅವಧಿಗೆ ಪುನರ್‌ನೇಮಕಕ್ಕೆ ಅರ್ಹರಾಗಿರತಕ್ಕದ್ದಲ್ಲ.

(7) ಕುಲಪತಿಯವರನ್ನು, ಈ ಅಧ್ಯಾದೇಶದ ಉಪಬಂಧಗಳನ್ನು ಉದ್ದೇಶಪೂರ್ವಕವಾಗಿ ಬಿಟ್ಟುಬಿಡುವ ಅಥವಾ ನೆರವೇರಿಸಲು ನಿರಾಕರಿಸುವ ಅಥವಾ ಅವರಲ್ಲಿ ನಿಹಿತವಾದ ಅಧಿಕಾರಗಳನ್ನು ದುರುಪಯೋಗಪಡಿಸಿಕೊಂಡ ಕಾರಣದ ಮೇಲೆ ಮತ್ತು ಸರ್ಕಾರವು (8)ನೇ ಉಪಪ್ರಕರಣದ ಅಡಿಯಲ್ಲಿ ಅದರಿಂದ ಆದೇಶಿಸಲಾದ ವಿಚಾರಣೆಯ ವರದಿಯನ್ನು ಪರಿಗಣಿಸಿದ ನಂತರ ಮತ್ತು ಅದು ನೀಡಿದ ಶಿಫಾರಸ್ಸಿನನ್ವಯ ಕುಲಾಧಿಪತಿಯು ಹೊರಡಿಸಿದ ಆದೇಶದ ಹೊರತು, ಪದದಿಂದ ತೆಗೆದು ಹಾಕತಕ್ಕದ್ದಲ್ಲ.

(8) ಈ ಪ್ರಕರಣದ ಅಡಿಯಲ್ಲಿ ಒಂದು ವಿಚಾರಣೆಯನ್ನು ನಡೆಸುವ ಉದ್ದೇಶಕ್ಕಾಗಿ ಸರ್ಕಾರವು, ಉಚ್ಚ ನ್ಯಾಯಾಲಯದ ಅಥವಾ ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿರುವ ಅಥವಾ ಆಗಿದ್ದ ಒಬ್ಬ ವ್ಯಕ್ತಿಯನ್ನು ನೇಮಕ ಮಾಡತಕ್ಕದ್ದು. ವಿಚಾರಣಾ ಪ್ರಾಧಿಕಾರವು, ಕುಲಪತಿಯು ಮನವಿಯನ್ನು ಸಲ್ಲಿಸಲು ಅವಕಾಶ ನೀಡಿದ ನಂತರ ವಿಚಾರಣೆ ನಡೆಸತಕ್ಕದ್ದು ಮತ್ತು ವಿಧಿಸಬೇಕಾದ ಯಾವುದೇ ದಂಡನೆ ಇದ್ದರೆ ಅದು ಒಳಗೊಂಡಂತೆ ಒಂದು ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು ಮತ್ತು ಸರ್ಕಾರವು, ವರದಿಯನ್ನು ಪರಿಶೀಲಿಸಿದ ನಂತರ ಕುಲಾಧಿಪತಿಗೆ ಸಲಹೆಯನ್ನು ನೀಡತಕ್ಕದ್ದು. ಕುಲಾಧಿಪತಿಯವರು ಸಾಧ್ಯವಾದಷ್ಟುಮಟ್ಟಿಗೆ ಆರು ತಿಂಗಳೊಳಗಾಗಿ ಅಂಥ ಸಲಹೆಗೆ ಅನುಸಾರವಾಗಿ ಕ್ರಮ ಕೈಗೊಳ್ಳತಕ್ಕದ್ದು.

(9) ಕುಲಪತಿಯವರ ಉಪಲಬ್ಧಿಗಳು ಮತ್ತು ಇತರ ಸೇವಾ ಷರತ್ತುಗಳು ಕುಲಾಧಿಪತಿಯು ನಿರ್ಧರಿಸಬಹುದಾದಂತೆ ಇರತಕ್ಕದ್ದು ಮತ್ತು ಅವುಗಳನ್ನು ಅವರು ಕುಲಪತಿಯಾಗಿ ನೇಮಕವಾದ ತರುವಾಯ ಅವರಿಗೆ ಅನಾನುಕೂಲವಾಗುವಂತೆ ವ್ಯತಸ್ಥಗೊಳಿಸತಕ್ಕದ್ದಲ್ಲ. ಕುಲಪತಿಯಾಗಿ ತಮ್ಮ ಅಧಿಕಾರಾವಧಿಯಲ್ಲಿ ವಯೋನಿವೃತ್ತಿಯ ಮೇಲೆ ನಿವೃತ್ತರಾಗುವ ಕುಲಪತಿಯ ಸಂದರ್ಭದಲ್ಲಿ, ಈಗಾಗಲೇ ನಿರ್ಧರಿಸಲಾದ ಅವರ ಸೇವಾ ಷರತ್ತುಗಳು ಮುಂದುವರಿಯತಕ್ಕದ್ದು. ಅವರ ಎಲ್ಲ ನಿವೃತ್ತಿ ಸೌಲಭ್ಯಗಳನ್ನು ತಡೆ ಹಿಡಿಯತಕ್ಕದ್ದು, ಅವುಗಳನ್ನು ಅವರು ಕುಲಪತಿಯಾಗಿ ಪದವನ್ನು ತ್ಯಜಿಸಿದ ನಂತರ ಬಿಡುಗಡೆ ಮಾಡತಕ್ಕದ್ದು.

(10) ನಿವೃತ್ತಿಹೊಂದಿದ ಒಬ್ಬ ವ್ಯಕ್ತಿಯು ಕುಲಪತಿಯಾಗಿ ನೇಮಕಗೊಂಡರೆ, ಅವರು ಕುಲಪತಿಯಾಗಿ ನೇಮಕಗೊಂಡ ಮೇಲೆ ಉಪಲಬ್ಧಿಗಳು ಸೇರಿದಂತೆ ಸೇವಾ ನಿಬಂಧನೆ ಮತ್ತು ಷರತ್ತುಗಳನ್ನು ಕುಲಾಧಿಪತಿಯವರು ನಿರ್ಣಯಿಸತಕ್ಕದ್ದು. ಅವರು ಪಡೆಯುವ ನಿವೃತ್ತಿ ವೇತನದ ಮೊತ್ತವನ್ನು ಮತ್ತು ಭತ್ಯೆಗಳನ್ನು ಉಪಲಬ್ಧಿಗಳಿಂದ ಕಳೆಯತಕ್ಕದ್ದು.

**14. ಕುಲಪತಿಯವರ ಅಧಿಕಾರಗಳು.**–(1) ಕುಲಪತಿಯು, ವಿಶ್ವವಿದ್ಯಾಲಯದ ಪ್ರಧಾನ ಕಾರ್ಯನಿರ್ವಾಹಕ ಮತ್ತು ಶೈಕ್ಷಣಿಕ ಪರಿಷತ್ತಿನ ಅಧಿಕಾರಿಯಾಗಿರತಕ್ಕದ್ದು ಮತ್ತು ವಿಶ್ವವಿದ್ಯಾಲಯದ ವ್ಯವಹಾರಗಳ ಮೇಲೆ ಸಾಮಾನ್ಯ ನಿಯಂತ್ರಣವನ್ನು ಚಲಾಯಿಸತಕ್ಕದ್ದು. ಅವರು ವಿಶ್ವವಿದ್ಯಾಲಯದಲ್ಲಿ ಶಿಸ್ತುಪಾಲನೆಗೆ ಅವಶ್ಯವಾದ ಎಲ್ಲ ಅಧಿಕಾರಗಳನ್ನು ಚಲಾಯಿಸತಕ್ಕದ್ದು.

(2) ಅವರು ಶೈಕ್ಷಣಿಕ ಪರಿಷತ್ತು, ಸಿಂಡಿಕೇಟ್ ಮತ್ತು ಹಣಕಾಸು ಸಮಿತಿಯ ಪದನಿಮಿತ್ತ ಅಧ್ಯಕ್ಷರಾಗಿರತಕ್ಕದ್ದು. ಅವರು ಕುಲಾಧಿಪತಿಯ ಮತ್ತು ಸಹ ಕುಲಾಧಿಪತಿಯ ಗೈರುಹಾಜರಿಯಲ್ಲಿ ಘಟಿಕೋತ್ಸವದ ಅಧ್ಯಕ್ಷತೆಯನ್ನು ವಹಿಸತಕ್ಕದ್ದು. ಅವರು ವಿಶ್ವವಿದ್ಯಾಲಯದ ಪ್ರಾಧಿಕಾರಗಳ ಅಥವಾ ನಿಕಾಯಗಳ ಸಭೆಗಳ ಅಧ್ಯಕ್ಷತೆಯನ್ನು ವಹಿಸತಕ್ಕದ್ದು ಮತ್ತು ಅವರು ಮತ ಚಲಾಯಿಸಲು ಹಕ್ಕುಳ್ಳವರಾಗಿರತಕ್ಕದ್ದು.

(3) ಅವರು ಈ ಅಧ್ಯಾದೇಶದ, ಪರಿನಿಯಮಗಳ, ಆರ್ಡಿನೆನ್ಸ್‌ಗಳ ಮತ್ತು ವಿನಿಯಮಗಳ ಎಲ್ಲಾ ಉಪಬಂಧಗಳ ಪಾಲನೆಯನ್ನು ಖಚಿತಪಡಿಸಿಕೊಳ್ಳತಕ್ಕದ್ದು ಮತ್ತು ಆ ಉದ್ದೇಶಕ್ಕಾಗಿ ಅವಶ್ಯವಾದ ಎಲ್ಲ ಅಧಿಕಾರಗಳನ್ನು ಹೊಂದಿರತಕ್ಕದ್ದು.

(4) ಅವರು ತಾವಾಗಿಯೇ ಆಗಲಿ ಅಥವಾ ತಮ್ಮಿಂದ ಲಿಖಿತದಲ್ಲಿ ಅಧಿಕೃತರಾದ ವಿಶ್ವವಿದ್ಯಾಲಯದ ಯಾವೊಬ್ಬ ಅಧಿಕಾರಿಯ ಮೂಲಕವೇ ಆಗಲಿ, ಶೈಕ್ಷಣಿಕ ಪರಿಷತ್ತು, ಸಿಂಡಿಕೇಟ್ ಮತ್ತು ಹಣಕಾಸು ಸಮಿತಿಯ ಸಭೆಗಳನ್ನು ಕರೆಯಬಹುದು ಮತ್ತು ಈ ಪ್ರಾಧಿಕಾರಗಳ ತೀರ್ಮಾನಗಳನ್ನು ಜಾರಿಗೆ ತರಲು ಮತ್ತು ಕಾರ್ಯಗತಗೊಳಿಸಲು ಅವಶ್ಯವಾಗಬಹುದಾದಂಥ ಎಲ್ಲ ಕಾರ್ಯಗಳನ್ನು ನೆರವೇರಿಸತಕ್ಕದ್ದು.

(5) ಕುಲಪತಿಯವರು, ತ್ವರಿತ ಕ್ರಮವು ಅಗತ್ಯವೆಂದು ಅವರು ಅಭಿಪ್ರಾಯಪಡುವ ಯಾವುದೇ ತುರ್ತು ಸಂದರ್ಭದಲ್ಲಿ ಅವರು ಅವಶ್ಯವೆಂದು ಭಾವಿಸುವಂಥ ಕ್ರಮವನ್ನು ತೆಗೆದುಕೊಳ್ಳತಕ್ಕದ್ದು ಮತ್ತು ಆ ತರುವಾಯ ಅತಿ ಶೀಘ್ರ ಸಮಯದಲ್ಲಿ ಸಾಮಾನ್ಯವಾಗಿ ಆ ವಿಷಯವನ್ನು ವ್ಯವಹರಿಸುತ್ತಿದ್ದಂಥ ಪ್ರಾಧಿಕಾರಕ್ಕೆ ಅಥವಾ ನಿಕಾಯಕ್ಕೆ ತೆಗೆದುಕೊಂಡ ಕ್ರಮದ ಬಗ್ಗೆ ವರದಿ ಮಾಡತಕ್ಕದ್ದು:

ಪರಂತು, ಕುಲಪತಿಯವರು ತೆಗೆದುಕೊಂಡ ಕ್ರಮವನ್ನು ಸಂಬಂಧಪಟ್ಟ ಪ್ರಾಧಿಕಾರ ಅಥವಾ ನಿಕಾಯವು ಅನುಮೋದಿಸದಿದ್ದರೆ, ಅವರು ಆ ವಿಷಯವನ್ನು ಸರ್ಕಾರದ ಮೂಲಕ ಕುಲಾಧಿಪತಿಯವರಿಗೆ ಒಪ್ಪಿಸಬಹುದು, ಆ ಬಗ್ಗೆ ಅವರ ತೀರ್ಮಾನವೇ ಅಂತಿಮವಾಗಿರತಕ್ಕದ್ದು:

ಮತ್ತು ಪರಂತು, ಈ ಉಪಪ್ರಕರಣದ ಅಡಿಯಲ್ಲಿ ಕುಲಪತಿಯವರ ವರದಿಯ ಆಧಾರದ ಮೇಲೆ ಪ್ರಾಧಿಕಾರ ಅಥವಾ ನಿಕಾಯವು ತೆಗೆದುಕೊಂಡ ತೀರ್ಮಾನದಿಂದ ವಿಶ್ವವಿದ್ಯಾಲಯದ ಸೇವೆಯಲ್ಲಿರುವ ಯಾವೊಬ್ಬ ವ್ಯಕ್ತಿಯು ಬಾಧಿತನಾದರೆ, ಅವರಿಗೆ ತೀರ್ಮಾನವನ್ನು ತಿಳಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಆ ವ್ಯಕ್ತಿಯು ಕುಲಾಧಿಪತಿಯ ಮುಂದೆ ಅಪೀಲು ಹೂಡಬಹುದು ಮತ್ತು ಅಂಥ ಅಪೀಲಿನ ಮೇಲೆ ಕುಲಾಧಿಪತಿಯ ತೀರ್ಮಾನವೇ ಅಂತಿಮವಾಗಿರತಕ್ಕದ್ದು:

ಅಲ್ಲದೆ ಪರಂತು, ಈ ಉಪಪ್ರಕರಣದ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ವಿಶ್ವವಿದ್ಯಾಲಯದ ನೌಕರರ ವೇತನ ಶ್ರೇಣಿಯನ್ನು ಪರಿಷ್ಕರಿಸಲು ಅಥವಾ ಒಂದು ಸಂಸ್ಥೆಗೆ ಅಥವಾ ಶಿಕ್ಷಣ ವ್ಯಾಸಂಗ ಕ್ರಮಕ್ಕೆ ಸಂಯೋಜನೆಯನ್ನು ಮಂಜೂರು ಮಾಡಲು ಚಲಾಯಿಸತಕ್ಕದ್ದಲ್ಲ ಮತ್ತು ಈ ಉಪ ಪ್ರಕರಣದ ಅಡಿಯಲ್ಲಿ ಅಧಿಕಾರಗಳನ್ನು ಚಲಾಯಿಸಿ ಪರಿನಿಯಮಗಳು ಅಥವಾ ವಿನಿಯಮಗಳನ್ನು ರಚಿಸಿದರೆ ಅವು ಈ ಅಧ್ಯಾದೇಶದ ಸೂಕ್ತ ಉಪಬಂಧಗಳ ಅಡಿಯಲ್ಲಿ ಕುಲಾಧಿಪತಿಯವರ ಅನುಮೋದನೆಗೆ ಒಳಪಟ್ಟಿರತಕ್ಕದ್ದು ಮತ್ತು ಆರ್ಡಿನೆನ್ಸ್‌ಗಳನ್ನು ರಚಿಸಿದ್ದರೆ, ಅವುಗಳನ್ನು ಈ ಅಧ್ಯಾದೇಶದ ಅನುಸಾರ ಕುಲಾಧಿಪತಿಯವರಿಗೆ ಸಲ್ಲಿಸತಕ್ಕದ್ದು.

(6) ಕುಲಪತಿಯವರು, ಪರಿನಿಯಮಗಳು, ಆರ್ಡಿನೆನ್ಸ್‌ಗಳು ಮತ್ತು ವಿನಿಯಮಗಳ ಮೂಲಕ ನಿಯಮಿಸಬಹುದಾದ ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು.

**15. ಕುಲಪತಿಯವರ ಹುದ್ದೆಯು ಖಾಲಿ ಇರುವ ಕಾಲದಲ್ಲಿ ಕಾರ್ಯ ವ್ಯವಸ್ಥೆ.– (1)** ರಜೆ, ಅನಾರೋಗ್ಯ ಅಥವಾ ಇತರ ಯಾವುದೇ ಕಾರಣದಿಂದಾಗಿ ಕುಲಪತಿಯವರ ತಾತ್ಕಾಲಿಕ ಗೈರುಹಾಜರಿಯ ಅವಧಿಯಲ್ಲಿ, ಕುಲಾಧಿಪತಿಯವರು, ಕುಲಪತಿಯವರ ಕರ್ತವ್ಯಗಳನ್ನು ನಿರ್ವಹಿಸುವುದಕ್ಕಾಗಿ ತಾವು ಸೂಕ್ತವೆಂದು ಭಾವಿಸುವಂಥ ವ್ಯವಸ್ಥೆಗಳನ್ನು ಮಾಡಬಹುದು:

ಪರಂತು, ಕುಲಾಧಿಪತಿಯವರು ವ್ಯವಸ್ಥೆಗಳನ್ನು ಮಾಡುವವರೆಗೆ, ಕುಲಪತಿಯವರು, ವಿಶ್ವವಿದ್ಯಾಲಯದಲ್ಲಿ ಲಭ್ಯವಿರುವ ಜ್ಯೇಷ್ಠತಮ ಡೀನರನ್ನು ಒಂದು ತಿಂಗಳಿಗಿಂತ ಹೆಚ್ಚಿಲ್ಲದ ಅವಧಿಗೆ ಅಥವಾ ಕುಲಾಧಿಪತಿಯವರು ಅಂಥ ವ್ಯವಸ್ಥೆಗಳನ್ನು ಮಾಡುವವರೆಗೆ, ಇವುಗಳಲ್ಲಿ ಯಾವುದು ಮುಂಚಿತವೋ ಆವರೆಗೆ, ಕುಲಪತಿಯವರ ಪ್ರಸಕ್ತ ಕರ್ತವ್ಯಗಳ ಪ್ರಭಾರದಲ್ಲಿರಿಸಲು ನಿಯೋಜಿಸಬಹುದು.

(2) ಕುಲಪತಿಯವರ ಹುದ್ದೆಯು ಭರ್ತಿಯಾಗದೆ ಖಾಲಿ ಉಳಿದಿರುವ ಅವಧಿಯಲ್ಲಿ, ವಿಶ್ವವಿದ್ಯಾಲಯದಲ್ಲಿ ಲಭ್ಯವಿರುವ ಅಂಥ ಜ್ಯೇಷ್ಠತಮ ಡೀನರನ್ನು ಕುಲಪತಿಯಾಗಿ ಕಾರ್ಯನಿರ್ವಹಿಸುವುದಕ್ಕಾಗಿ ಕುಲಾಧಿಪತಿಯವರು ನೇಮಕ ಮಾಡಬಹುದು ಮತ್ತು ಹಾಗೆ ನೇಮಕಗೊಂಡ ವ್ಯಕ್ತಿಯು ಎಲ್ಲ ಅಧಿಕಾರಗಳನ್ನು ಹೊಂದಿರತಕ್ಕದ್ದು ಮತ್ತು ಕುಲಪತಿಯವರ ಎಲ್ಲ ವಿಶೇಷಾಧಿಕಾರಗಳಿಗೆ ಮತ್ತು ಇದರ ಸಂಬಂಧದಲ್ಲಿ ಪರಿನಿಯಮಗಳೇನಾದರೂ ಇದ್ದರೆ ಅವುಗಳಿಗೆ ಅನುಸಾರವಾಗಿ ಕುಲಾಧಿಪತಿಯು ನಿರ್ಣಯಿಸಬಹುದಾದಂತೆ ಅಂಥ ಉಪಲಬ್ಧಿಗಳಿಗೆ ಮತ್ತು ಭತ್ಯೆಗಳಿಗೆ ಹಕ್ಕುಳ್ಳವರಾಗಿರತಕ್ಕದ್ದು.

**16. ಕುಲಸಚಿವರು.**–(1) ಕುಲಸಚಿವರು, ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು. ಸರ್ಕಾರವು ಉನ್ನತ ಕಾಲ ಶ್ರೇಣಿಯ ಗ್ರೂಪ್ 'ಎ' ಅಧಿಕಾರಿಯ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಒಬ್ಬ ಅಧಿಕಾರಿಯನ್ನು ಅಥವಾ ವಿಶ್ವವಿದ್ಯಾಲಯದ ಯಾವುದೇ ವ್ಯಾಸಂಗ ವಿಭಾಗದಲ್ಲಿ ಕನಿಷ್ಠ ಐದು ವರ್ಷ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ ಒಬ್ಬ ಹಿರಿಯ ಪ್ರಾಧ್ಯಾಪಕರನ್ನು ವಿಶ್ವವಿದ್ಯಾಲಯದ ಕುಲಸಚಿವರಾಗಿ ನೇಮಕ ಮಾಡಬಹುದು.

(2) ಕುಲಸಚಿವರು, ಶೈಕ್ಷಣಿಕ ಪರಿಷತ್ತಿನ ಮತ್ತು ಸಿಂಡಿಕೇಟಿನ ಪದನಿಮಿತ್ತ ಸದಸ್ಯ ಕಾರ್ಯದರ್ಶಿಯೂ ಮತ್ತು ಹಣಕಾಸು ಸಮಿತಿಯ ಸದಸ್ಯನೂ ಆಗಿರತಕ್ಕದ್ದು.

(3) ಈ ಮುಂದಿನವು ಕುಲಸಚಿವರ ಕರ್ತವ್ಯವಾಗಿರತಕ್ಕದ್ದು,–

(ಎ) ವಿಶ್ವವಿದ್ಯಾಲಯದ ದಾಖಲೆಗಳ, ಸಾಮಾನ್ಯ ಮೊಹರಿನ ಮತ್ತು ಕುಲಪತಿ ಅಥವಾ ಸಿಂಡಿಕೇಟ್ ಅವರ ವಶಕ್ಕೆ ಒಪ್ಪಿಸುವಂಥ ಇತರ ಸ್ವತ್ತಿನ ಅಭಿರಕ್ಷಕರಾಗಿರುವುದು;

(ಬಿ) ಸಿಂಡಿಕೇಟಿನ, ಶೈಕ್ಷಣಿಕ ಪರಿಷತ್ತಿನ ಅಥವಾ ವ್ಯಾಸಂಗ ವಿಭಾಗಗಳ, ಅಧ್ಯಯನ ಮಂಡಳಿಯ ಮತ್ತು ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಸಭೆಗಳನ್ನು ಕರೆಯುವ ನೋಟೀಸುಗಳನ್ನು ಹೊರಡಿಸುವುದು ಮತ್ತು ಅಂಥ ಎಲ್ಲ ಸಭೆಗಳ ನಡವಳಿಗಳನ್ನು ಇಡುವುದು;

(ಸಿ) ಅವರು ಸದಸ್ಯ ಕಾರ್ಯದರ್ಶಿಯಾಗಿರುವ ಪ್ರಾಧಿಕಾರಗಳ ಅಧಿಕೃತ ಪತ್ರವ್ಯವಹಾರವನ್ನು ನಡೆಸುವುದು;

(ಡಿ) ವಿಶ್ವವಿದ್ಯಾಲಯದ ಪ್ರಾಧಿಕಾರಗಳ ಸಭೆಗಳ ಕಾರ್ಯಸೂಚಿಯ ಪ್ರತಿಗಳನ್ನು, ಅವುಗಳನ್ನು ಹೊರಡಿಸಿದ ಕೂಡಲೇ ಮತ್ತು ಸಭೆಗಳನ್ನು ನಡೆಸಿದ ಒಂದು ತಿಂಗಳೊಳಗಾಗಿ ಅವುಗಳ ನಡವಳಿಗಳನ್ನು ಕುಲಾಧಿಪತಿಗೆ ಮತ್ತು ಸರ್ಕಾರಕ್ಕೆ ಒದಗಿಸುವುದು.

(4) ಕುಲಸಚಿವರು ಪರಿನಿಯಮಗಳು, ಆರ್ಡಿನೆನ್ಸ್‌ಗಳು ಅಥವಾ ವಿನಿಯಮಗಳು ನಿಯಮಿಸಬಹುದಾದ ಮತ್ತು ಕುಲಪತಿಯು ಕಾಲಕಾಲಕ್ಕೆ ಹಂಚಿಕೆ ಮಾಡಬಹುದಾದ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

(5) ಕುಲಸಚಿವರಿಗೆ ಒಬ್ಬರು ಅಥವಾ ಅದಕ್ಕೂ ಹೆಚ್ಚಿನ ಉಪಕುಲಸಚಿವರು ಮತ್ತು ಸಹಾಯಕ ಕುಲಸಚಿವರು ನೆರವು ನೀಡತಕ್ಕದ್ದು.

(6) ವಿಶ್ವವಿದ್ಯಾಲಯದಿಂದ ಅಥವಾ ಅದರ ವಿರುದ್ಧ ಹೂಡಲಾದ ಎಲ್ಲಾ ದಾವೆಗಳಲ್ಲಿ ಮತ್ತು ಇತರ ಕಾನೂನು ವ್ಯವಹರಣೆಗಳಲ್ಲಿ, ವಾದಪತ್ರಗಳಿಗೆ ಕುಲಸಚಿವರು ಸಹಿ ಮಾಡಿ ಸತ್ಯಾಪನೆ ಮಾಡತಕ್ಕದ್ದು ಮತ್ತು ಅಂತಹ ದಾವೆಗಳಲ್ಲಿನ ಮತ್ತು ವ್ಯವಹರಣೆಗಳಲ್ಲಿನ ಎಲ್ಲ ಆದೇಶಿಕೆಗಳನ್ನು ಕುಲಸಚಿವರಿಗೆ ನೀಡತಕ್ಕದ್ದು ಮತ್ತು ಅವರಿಗೆ ಜಾರಿ ಮಾಡತಕ್ಕದ್ದು.

**17. ಕುಲಸಚಿವರು (ಮೌಲ್ಯಮಾಪನ).**– (1) ಕುಲಸಚಿವರು (ಮೌಲ್ಯಮಾಪನ) ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು. ಸರ್ಕಾರವು, ಯಾವುದೇ ವಿಶ್ವವಿದ್ಯಾಲಯದ ವ್ಯಾಸಂಗ ವಿಭಾಗದ ಒಬ್ಬ ಹಿರಿಯ ಸದಸ್ಯನನ್ನು ವಿಶ್ವವಿದ್ಯಾಲಯದ ಕುಲಸಚಿವ (ಮೌಲ್ಯಮಾಪನ) ಆಗಿ ನೇಮಕ ಮಾಡಬಹುದು:

ಪರಂತು, ಕುಲಸಚಿವರು (ಮೌಲ್ಯಮಾಪನ) ಆಗಿ ನೇಮಿಸಲು ಅಂಥ ವ್ಯಕ್ತಿಯು ಲಭ್ಯವಿರದಿದ್ದಲ್ಲಿ, ಕುಲಪತಿಯವರು ಶಿಫಾರಸು ಮಾಡಿದ ಮೂವರಿಗಿಂತ ಕಡಿಮೆಯಾಗಿರದ ವ್ಯಕ್ತಿಗಳ ಪಟ್ಟಿಯಿಂದ, ಸಿಂಡಿಕೇಟಿನ ಅನುಮೋದನೆಯೊಡನೆ, ಕುಲಪತಿಯವರು ಕುಲಸಚಿವರು (ಮೌಲ್ಯಮಾಪನ) ಇವರನ್ನು ನೇಮಕಮಾಡತಕ್ಕದ್ದು. ಪರಿನಿಯಮಗಳ ಮೂಲಕ ನಿಯಮಿಸಲಾದ ಅವಧಿಯೊಳಗೆ, ಸಿಂಡಿಕೇಟ್ ಪಟ್ಟಿಯಲ್ಲಿರುವ ಯಾವೊಬ್ಬ ವ್ಯಕ್ತಿಯನ್ನು ಅನುಮೋದಿಸದಿದ್ದರೆ, ಸರ್ಕಾರವು, ಕುಲಪತಿಯವರೊಡನೆ ಸಮಾಲೋಚಿಸಿ, ಅವರ ಪೈಕಿ ಕುಲಸಚಿವರು (ಮೌಲ್ಯಮಾಪನ) ಆಗಲು ಸೂಕ್ತವೆಂದು ತಾನು ಭಾವಿಸುವ ಅಂಥ ಇತರ ವ್ಯಕ್ತಿಯನ್ನು ನೇಮಕ ಮಾಡಬಹುದು. ಹಾಗೆ ನೇಮಕಗೊಂಡ ಕುಲಸಚಿವರು (ಮೌಲ್ಯಮಾಪನ) ಇವರ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ಮತ್ತು ಉಪಲಬ್ಧಿಗಳನ್ನು ಸರ್ಕಾರವು ನಿರ್ಧರಿಸಬಹುದಾದಂಥವುಗಳಾಗಿರತಕ್ಕದ್ದು.

(2) ಕುಲಸಚಿವರು (ಮೌಲ್ಯಮಾಪನ) ಸಿಂಡಿಕೇಟ್, ಶೈಕ್ಷಣಿಕ ಪರಿಷತ್ತು, ಹಣಕಾಸು ಸಮಿತಿ ಮತ್ತು ಎಲ್ಲ ಇತರ ವ್ಯಾಸಂಗ ವಿಭಾಗಗಳ ಸದಸ್ಯರಾಗಿರತಕ್ಕದ್ದು.

(3) ಕುಲಸಚಿವರು (ಮೌಲ್ಯಮಾಪನ) ಪರೀಕ್ಷೆಗಳನ್ನು ನಡೆಸುವ ಮತ್ತು ಅದಕ್ಕೆ ಪ್ರಾಸಂಗಿಕವಾದ ಮತ್ತು ಅದಕ್ಕೆ ಸಹಾಯಕವಾದ ಎಲ್ಲ ಇತರ ವಿಷಯಗಳ ಪ್ರಭಾರದಲ್ಲಿರತಕ್ಕದ್ದು ಮತ್ತು ಪರಿನಿಯಮಗಳು ಅಥವಾ ಆರ್ಡಿನೆನ್ಸ್‌ಗಳ ಮೂಲಕ ನಿಯಮಿಸಬಹುದಾದಂಥ ಅಥವಾ ಕುಲಪತಿಯಿಂದ ಹಂಚಿಕೆಯಾಗಬಹುದಾದಂಥ ಇತರ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

(4) ಕುಲಸಚಿವರು (ಮೌಲ್ಯಮಾಪನ) ಇವರಿಗೆ ಒಬ್ಬ ಅಥವಾ ಹೆಚ್ಚು ಉಪ ಕುಲಸಚಿವರು (ಮೌಲ್ಯಮಾಪನ) ಮತ್ತು ಸಹಾಯಕ ಕುಲಸಚಿವರು (ಮೌಲ್ಯಮಾಪನ) ನೆರವು ನೀಡಬಹುದು.

**18. ಹಣಕಾಸು ಅಧಿಕಾರಿ.–** (1) ಹಣಕಾಸು ಅಧಿಕಾರಿಯು, ಕುಲಪತಿಯು ಸಿಂಡಿಕೇಟಿಗೆ ಶಿಫಾರಸ್ಸು ಮಾಡಿದ, ಲೆಕ್ಕ ಪರಿಶೋಧನೆ, ಲೆಕ್ಕ ಪತ್ರ ಮತ್ತು ಹಣಕಾಸು ಆಡಳಿತದಲ್ಲಿ ಅನುಭವವಿರುವ ರಾಜ್ಯ ಲೆಕ್ಕ ಪತ್ರಗಳ ಇಲಾಖೆಯ ಜಂಟಿ ನಿಯಂತ್ರಕ ಕೇಡರ್‌ನಲ್ಲಿಯ ಅಧಿಕಾರಿಯು ಅಥವಾ ಉಪಮಹಾಲೇಖಪಾಲ ದರ್ಜೆಯ ಒಬ್ಬ ಅಧಿಕಾರಿಯು ಇರುವ ಮೂರು ವ್ಯಕ್ತಿಗಳಿಗಿಂತ ಕಡಿಮೆಯಾಗಿರದ ಹೆಸರುಗಳ ಪಟ್ಟಿಯಿಂದ ಸಿಂಡಿಕೇಟಿನ ಅನುಮೋದನೆಯೊಂದಿಗೆ ಸರ್ಕಾರದಿಂದ ನೇಮಕ ಮಾಡಲಾಗುವ ವಿಶ್ವವಿದ್ಯಾಲಯದ ಒಬ್ಬ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು. ಪರಿನಿಯಮಗಳ ಮೂಲಕ ನಿಯಮಿಸಲಾದ ಸಮಯದೊಳಗೆ ಪಟ್ಟಿಯಲ್ಲಿಯ ಯಾರ ಹೆಸರೂ ಸಿಂಡಿಕೇಟಿನಿಂದ ಅನುಮೋದಿತವಾಗಿರದಿದ್ದರೆ, ಸರ್ಕಾರವು ಹಣಕಾಸು ಅಧಿಕಾರಿಯಾಗಿರಲು ಸೂಕ್ತವೆಂದು ಅದು ಭಾವಿಸುವಂಥ ಇತರ ವ್ಯಕ್ತಿಯನ್ನು ನೇಮಕ ಮಾಡಬಹುದು.

(2) ಹಣಕಾಸು ಅಧಿಕಾರಿಯ ನೇಮಕದ ಅವಧಿ ಮತ್ತು ಅವರ ಉಪಲಬ್ಧಿಗಳು ಹಾಗೂ ಇತರ ನಿಬಂಧನೆಗಳು ಮತ್ತು ಷರತ್ತುಗಳು ಸರ್ಕಾರವು ನಿರ್ಧರಿಸುವಂಥವುಗಳಾಗಿರತಕ್ಕದ್ದು.

(3) ಹಣಕಾಸು ಅಧಿಕಾರಿಯು, ಹಣಕಾಸು ಸಮಿತಿಯ ನಿಯಂತ್ರಣಕ್ಕೊಳಪಟ್ಟು, ಪರಿನಿಯಮಗಳ, ಆರ್ಡಿನೆನ್ಸ್‌ಗಳ ಮತ್ತು ವಿನಿಯಮಗಳ ಮೂಲಕ ನಿಯಮಿಸಬಹುದಾದಂತೆ ಅಥವಾ ಕುಲಪತಿ ಅಥವಾ ಕುಲಸಚಿವರು ಕಾಲಕಾಲಕ್ಕೆ ಅಗತ್ಯಪಡಿಸಬಹುದಾದಂತೆ ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂತಹ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು. ಅವರು ಶೈಕ್ಷಣಿಕ ಪರಿಷತ್ತಿನ ಪದನಿಮಿತ್ತ ಸದಸ್ಯರಾಗಿರತಕ್ಕದ್ದು ಮತ್ತು ಹಣಕಾಸು ಸಮಿತಿಯ ಪದನಿಮಿತ್ತ ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು.

**19. ಕುಲಸಚಿವರ, ಹಣಕಾಸು ಅಧಿಕಾರಿಯ ಹುದ್ದೆಯು ತಾತ್ಕಾಲಿಕವಾಗಿ ಖಾಲಿ ಇರುವುದು.–** (1) ಕುಲಸಚಿವರ ಅಥವಾ ಹಣಕಾಸು ಅಧಿಕಾರಿಯ ಅಮಾನತು ಅಥವಾ ತಾತ್ಕಾಲಿಕ ಗೈರು ಹಾಜರಿಯ ಸಂದರ್ಭದಲ್ಲಿ, ಕುಲಾಧಿಪತಿಯವರು, ಕುಲಸಚಿವರು ಅಥವಾ ಸಂದರ್ಭಾನುಸಾರ ಹಣಕಾಸು ಅಧಿಕಾರಿಯ ಕರ್ತವ್ಯಗಳನ್ನು ನಿರ್ವಹಿಸಲು ವಿಶ್ವವಿದ್ಯಾಲಯದ ಇತರ ಸೂಕ್ತ ಅಧಿಕಾರಿಗೆ ಪ್ರಾಧಿಕಾರ ನೀಡಬಹುದು.

(2) ಕುಲಸಚಿವರ ಅಥವಾ ಹಣಕಾಸು ಅಧಿಕಾರಿಯ ಪದದಲ್ಲಿ ಖಾಲಿಸ್ಥಾನವನ್ನು ಭರ್ತಿ ಮಾಡಲು ಸೂಕ್ತ ಅಧಿಕಾರಿಯನ್ನು ನೇಮಕಾತಿ ಮಾಡುವವರೆಗೆ ಕುಲಪತಿಯು ತಮ್ಮ ವಿವೇಚನಾನುಸಾರ, ಅಂತಹ ಖಾಲಿ ಹುದ್ದೆಗಳ ಕರ್ತವ್ಯವನ್ನು ನಿರ್ವಹಿಸಲು ಯಾವೊಬ್ಬ ಅಧಿಕಾರಿಯನ್ನು ಪ್ರಾಧಿಕರಿಸಬಹುದು. ಕುಲಪತಿಯು, ಈ ಉಪಪ್ರಕರಣದ ಅಡಿಯಲ್ಲಿ ತಾವು ಕೈಗೊಂಡ ಕ್ರಮದ ಬಗ್ಗೆ ಕೂಡಲೇ ಸರ್ಕಾರಕ್ಕೆ ವರದಿ ಮಾಡತಕ್ಕದ್ದು.

**20. ಡೀನ್.–** (1) ಜ್ಯೇಷ್ಠತೆಯ ಅನುಸಾರವಾಗಿ ಪ್ರತಿಯೊಂದು ವ್ಯಾಸಂಗ ವಿಭಾಗದಲ್ಲಿ ಒಬ್ಬ ಪ್ರಾಧ್ಯಾಪಕರು, ಸರದಿಯ ಪ್ರಕಾರ ಎರಡು ವರ್ಷಗಳ ಅವಧಿಗೆ ವ್ಯಾಸಂಗ ವಿಭಾಗದ ಡೀನ್ ಆಗಿ ಕಾರ್ಯನಿರ್ವಹಿಸತಕ್ಕದ್ದು:

ಪರಂತು, ಪ್ರಾಧ್ಯಾಪಕರು ಇಲ್ಲದಿದ್ದರೆ, ಜ್ಯೇಷ್ಠತಮ ಸಹ ಪ್ರಾಧ್ಯಾಪಕರು ಡೀನ್ ಆಗಿ ಕಾರ್ಯನಿರ್ವಹಿಸತಕ್ಕದ್ದು:

ಮತ್ತು ಪರಂತು, ಯಾವುದೇ ವ್ಯಾಸಂಗ ವಿಭಾಗದಲ್ಲಿ ಯಾವೊಬ್ಬ ಪ್ರಾಧ್ಯಾಪಕ ಅಥವಾ ಸಹ ಪ್ರಾಧ್ಯಾಪಕರು ಇಲ್ಲದಿದ್ದರೆ, ಆಗ ಕುಲಪತಿಯು ತಮ್ಮ ವಿವೇಚನಾನುಸಾರ, ಡೀನ್ ಆಗಿ ಕಾರ್ಯನಿರ್ವಹಿಸಲು ಯಾವೊಬ್ಬ ಇತರ ಸೂಕ್ತ ಅಧ್ಯಾಪಕರನ್ನು ನಿಯೋಜಿಸಬಹುದು:

ಅಲ್ಲದೆ ಪರಂತು, ವ್ಯಾಸಂಗ ವಿಭಾಗದ ಡೀನ್ ಆಗಿ ಕಾರ್ಯ ನಿರ್ವಹಿಸಲು ವ್ಯಾಸಂಗ ವಿಭಾಗದಲ್ಲಿ ಯಾವ ವ್ಯಕ್ತಿಯೂ ದೊರೆಯದಿದ್ದಲ್ಲಿ ಅಥವಾ ವಿಶ್ವವಿದ್ಯಾಲಯವು ಯಾವುದೇ ವ್ಯಾಸಂಗ ವಿಭಾಗಕ್ಕೆ ಅಧ್ಯಯನಗಳ ವಿಭಾಗವನ್ನು ಹೊಂದಿಲ್ಲದಿದ್ದರೆ, ಆಗ ವ್ಯಾಸಂಗ ವಿಭಾಗದ ಡೀನ್ ಆಗಿ ಕಾರ್ಯನಿರ್ವಹಿಸಲು ವಿಶ್ವವಿದ್ಯಾಲಯದಿಂದ ಮನ್ನಣೆ ಪಡೆದ ಜಾನಪದ ಅಧ್ಯಯನ ಸಂಸ್ಥೆಯ ತಜ್ಞರನ್ನು ನಾಮನಿರ್ದೇಶನ ಮಾಡಬಹುದು.

(2) ಪ್ರತಿಯೊಂದು ವ್ಯಾಸಂಗ ವಿಭಾಗದ ಡೀನರು ವ್ಯಾಸಂಗ ವಿಭಾಗದ ಕಾರ್ಯನಿರ್ವಹಣಾ ಅಧಿಕಾರಿಯಾಗಿರತಕ್ಕದ್ದು ಮತ್ತು ವ್ಯಾಸಂಗ ವಿಭಾಗದ ಸಭೆಗಳ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(3) ಡೀನರು, ಪರಿನಿಯಮಗಳು ಅಥವಾ ಆರ್ಡಿನೆನ್ಸ್‌ಗಳ ಮೂಲಕ ನಿಯಮಿಸಬಹುದಾದ ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು.

**21. ಗ್ರಂಥಪಾಲರು.–** ಗ್ರಂಥಪಾಲರು ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು ಮತ್ತು ನೇಮಕಾತಿ ಮಂಡಳಿಯ ಶಿಫಾರಸ್ಸಿನ ಮೇರೆಗೆ ಸಿಂಡಿಕೇಟಿನಿಂದ ನೇಮಕಗೊಳ್ಳತಕ್ಕದ್ದು. ಅವರು ಪರಿನಿಯಮಗಳ ಮೂಲಕ ನಿಯಮಿಸಬಹುದಾದ ಅಂಥ ವಿದ್ಯಾರ್ಹತೆಗಳನ್ನು ಹೊಂದಿರತಕ್ಕದ್ದು ಮತ್ತು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು. ಅವರ ಉಪಲಬ್ಧಿಗಳು ಮತ್ತು ಸೇವಾ ನಿಬಂಧನೆಗಳು ಹಾಗೂ ಷರತ್ತುಗಳು, ಪರಿನಿಯಮಗಳ ಮೂಲಕ ನಿಯಮಿಸಬಹುದಾದಂಥವುಗಳಾಗಿರತಕ್ಕದ್ದು.

**22. ಅಧ್ಯಯನಾಂಗ, ಯೋಜನೆ, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ ಮಂಡಲಿಯ ನಿರ್ದೇಶಕರು.–** ಅಧ್ಯಯನಾಂಗ, ಯೋಜನೆ, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ ಮಂಡಲಿಯ ನಿರ್ದೇಶಕರು ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು ಮತ್ತು ಸಿಂಡಿಕೇಟಿನಿಂದ ನೇಮಕಗೊಳ್ಳತಕ್ಕದ್ದು. ಪರಿನಿಯಮಗಳ ಮೂಲಕ ನಿಯಮಿಸಬಹುದಾದ ಅಂಥ ವಿದ್ಯಾರ್ಹತೆಗಳನ್ನು ಅವರು ಹೊಂದಿರತಕ್ಕದ್ದು ಮತ್ತು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು. ಅವರ ಉಪಲಬ್ಧಿಗಳು ಮತ್ತು ಸೇವಾ ನಿಬಂಧನೆಗಳು ಹಾಗೂ ಷರತ್ತುಗಳು ಪರಿನಿಯಮಗಳ ಮೂಲಕ ನಿಯಮಿಸಬಹುದಾದಂಥವುಗಳಾಗಿರತಕ್ಕದ್ದು.

## ಅಧ್ಯಾಯ – IV

### ವಿಶ್ವವಿದ್ಯಾಲಯದ ಪ್ರಾಧಿಕಾರಗಳು

**23. ವಿಶ್ವವಿದ್ಯಾಲಯದ ಪ್ರಾಧಿಕಾರಗಳು.–** ಈ ಮುಂದಿನವು ವಿಶ್ವವಿದ್ಯಾಲಯದ ಪ್ರಾಧಿಕಾರಗಳಾಗಿರತಕ್ಕದ್ದು, ಎಂದರೆ:–

(ಎ) ಸಿಂಡಿಕೇಟ್;

(ಬಿ) ಶೈಕ್ಷಣಿಕ ಪರಿಷತ್ತು;

(ಸಿ) ಹಣಕಾಸು ಸಮಿತಿ;

(ಡಿ) ಅಧ್ಯಯನ ಮಂಡಳಿಗಳು;

(ಇ) ವ್ಯಾಸಂಗ ವಿಭಾಗಗಳು;

(ಎಫ್) ಅಧ್ಯಯನಾಂಗ, ಯೋಜನೆ, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ ಮಂಡಳಿ; ಮತ್ತು

(ಜಿ) ವಿಶ್ವವಿದ್ಯಾಲಯದ ಪ್ರಾಧಿಕಾರಗಳೆಂದು ಪರಿನಿಯಮಗಳ ಮೂಲಕ ಘೋಷಿಸಬಹುದಾದ ಅಂಥ ಇತರ ಪ್ರಾಧಿಕಾರಗಳು.

**24. ಸಿಂಡಿಕೇಟ್.–** (1) ಸಿಂಡಿಕೇಟ್ ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(ಎ) ಕುಲಪತಿ;

(ಬಿ) ಶಿಕ್ಷಣ ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ ಅಥವಾ ಉಪಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಅವರ ನಾಮನಿರ್ದೇಶಿತರು;

(ಸಿ) ಹಣಕಾಸು ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ ಅಥವಾ ಉಪಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಅವರ ನಾಮನಿರ್ದೇಶಿತರು;

(ಡಿ) ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ ಅಥವಾ ಉಪಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಅವರ ನಾಮನಿರ್ದೇಶಿತರು;

(ಇ) ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರು;

(ಎಫ್) ಜ್ಯೇಷ್ಠತೆಯ ಆಧಾರದ ಮೇಲೆ ಸರದಿಯ ಮೇಲೆ ಒಂದು ವರ್ಷದ ಅವಧಿಗಾಗಿ ಕುಲಪತಿಯವರಿಂದ ನಾಮನಿರ್ದೇಶಿತರಾದ ಒಬ್ಬ ಡೀನ್;

(ಜಿ) ಮೂರು ವರ್ಷಗಳ ಅವಧಿಗಾಗಿ ಸರ್ಕಾರವು ನಾಮನಿರ್ದೇಶನ ಮಾಡಿದ ಖ್ಯಾತ ಜಾನಪದ ತಜ್ಞರ ಪೈಕಿ ಆರು ಶ್ರೇಷ್ಠ ಜನಪದ ಅಧ್ಯಾಯಿಗಳು, ಅವರಲ್ಲಿ,–

(i) ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಗಳಿಗೆ ಸೇರಿದ ಒಬ್ಬರು ಇರತಕ್ಕದ್ದು;

(ii) ಇತರ ಹಿಂದುಳಿದ ವರ್ಗಗಳಿಗೆ ಸೇರಿದ ಒಬ್ಬರು ಇರತಕ್ಕದ್ದು;

(iii) ಒಬ್ಬರು ಮಹಿಳೆ ಇರತಕ್ಕದ್ದು;

(iv) ಧಾರ್ಮಿಕ ಅಲ್ಪಸಂಖ್ಯಾತರಿಗೆ ಸೇರಿದ ಒಬ್ಬರು ಇರತಕ್ಕದ್ದು;

(v) ಇತರೆ ಇಬ್ಬರು ಇರತಕ್ಕದ್ದು:

ಪರಂತು, ವಿಶ್ವವಿದ್ಯಾಲಯದಲ್ಲಿ ಯಾವುದೇ ಸಾಮರ್ಥ್ಯದಲ್ಲಿ ನೌಕರರಾಗಿರುವ ಯಾವೊಬ್ಬ ವ್ಯಕ್ತಿಯೂ ನಾಮನಿರ್ದೇಶನಕ್ಕೆ ಅರ್ಹನಾಗಿರತಕ್ಕದ್ದಲ್ಲ.

(ಹೆಚ್) ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಕುಲಪತಿಯು, ಜ್ಯೇಷ್ಠತೆಯ ಆಧಾರದಲ್ಲಿ ಸರದಿಯ ಮೇಲೆ ಒಂದು ವರ್ಷದ ಅವಧಿಗೆ ನಾಮನಿರ್ದೇಶನ ಮಾಡಬೇಕಾದ ಸ್ನಾತಕೋತ್ತರ ಅಧ್ಯಯನಗಳ ಒಬ್ಬ ಪ್ರಾಧ್ಯಾಪಕರು;

(2) ಸಿಂಡಿಕೇಟ್, ಒಂದು ವರ್ಷದಲ್ಲಿ ಕನಿಷ್ಠ ಪಕ್ಷ ಎಂಟು ಸಭೆಗಳನ್ನು ತಿಂಗಳ ಎರಡನೆಯ ಶನಿವಾರ ನಡೆಸತಕ್ಕದ್ದು. ಎರಡು ನಿರಂತರ ಸಭೆಗಳ ನಡುವಣ ಅವಧಿಯು ಎಂಟು ವಾರಗಳನ್ನು ಮೀರತಕ್ಕದ್ದಲ್ಲ. ಕುಲಪತಿಯು, ತುರ್ತು ಸಂದರ್ಭಗಳಲ್ಲಿ ವಿಶೇಷ ಸಭೆಗಳನ್ನು ನಡೆಸಬಹುದು.

(3) ಕುಲಾಧಿಪತಿ ಅಥವಾ ಸರ್ಕಾರವು, ಅವರು ನಿರ್ದಿಷ್ಟಪಡಿಸಬಹುದಾದಂತೆ ಅಂಥ ಪರಿಶೀಲನಾಂಶಗಳನ್ನು ಚರ್ಚಿಸಲು ಸಭೆಗಳನ್ನು ನಡೆಸುವುದಕ್ಕೆ ನಿರ್ದೇಶನಗಳನ್ನು ನೀಡಬಹುದು ಮತ್ತು ಕುಲಪತಿಯು ಅಂಥ ನಿರ್ದೇಶನಗಳನ್ನು ಪಾಲಿಸತಕ್ಕದ್ದು.

**25. ಸಿಂಡಿಕೇಟ್‌ನ ಅಧಿಕಾರಗಳು.–** (1) ಸಿಂಡಿಕೇಟ್, ವಿಶ್ವವಿದ್ಯಾಲಯದ ವ್ಯವಹಾರಗಳ ಆಡಳಿತದ ಅಧಿಕಾರವನ್ನು, ಅದರಲ್ಲೂ ವಿಶೇಷವಾಗಿ, ವಿಶ್ವವಿದ್ಯಾಲಯದ ನಿಧಿಗಳ ಮತ್ತು ಸ್ವತ್ತುಗಳ ನಿರ್ವಹಣೆಯ ಅಧಿಕಾರವನ್ನು ಹೊಂದಿರತಕ್ಕದ್ದು.

(2) ಹಿಂದೆ ಹೇಳಿದ ಅಧಿಕಾರಗಳ ಸಾಮಾನ್ಯಾನ್ವಯಕ್ಕೆ ಬಾಧಕವಾಗದಂತೆ, ಸಿಂಡಿಕೇಟು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯದ ಹಣಕಾಸು ಮತ್ತು ಎಲ್ಲ ಇತರ ಆಡಳಿತಾತ್ಮಕ ವ್ಯವಹಾರಗಳನ್ನು ನಿರ್ವಹಿಸುವುದು ಮತ್ತು ನಿಯಂತ್ರಿಸುವುದು ಹಾಗೂ ಆ ಉದ್ದೇಶಕ್ಕಾಗಿ ತಾನು ಅವಶ್ಯಕ ಹಾಗೂ ಸೂಕ್ತವೆಂದು ಭಾವಿಸಬಹುದಾದ ಅಂಥ ಸೂಕ್ತ ಏಜೆಂಟರನ್ನು ನೇಮಕ ಮಾಡುವುದು;

(ii) ವಿಶ್ವವಿದ್ಯಾಲಯದ ಪರವಾಗಿ ಕರಾರುಗಳನ್ನು ಮಾಡಿಕೊಳ್ಳುವುದು, ವ್ಯತಸ್ಥಗೊಳಿಸುವುದು, ಕಾರ್ಯಗತಗೊಳಿಸುವುದು ಮತ್ತು ರದ್ದುಗೊಳಿಸುವುದು;

(iii) 33ನೇ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು ಪರೀಕ್ಷಕರನ್ನು ನೇಮಕ ಮಾಡುವುದು ಮತ್ತು ಅವಶ್ಯವೆನಿಸಿದರೆ ಅವರನ್ನು ಬದಲಾಯಿಸುವುದು ಅಥವಾ ತೆಗೆದು ಹಾಕುವುದು ಹಾಗೂ ಅವರ ಫೀಜುಗಳು, ಉಪಲಬ್ಧಿಗಳು ಮತ್ತು ಪ್ರವಾಸ ಹಾಗೂ ಇತರ ಭತ್ಯೆಗಳನ್ನು ಸಹ ನಿಗದಿಪಡಿಸುವುದು;

(iv) ಪರಿನಿಯಮಗಳು, ಆರ್ಡಿನೆನ್ಸ್‌ಗಳು ಅಥವಾ ವಿನಿಯಮಗಳ ಮೂಲಕ ನಿಯಮಿಸಲಾದ ರೀತಿಯಲ್ಲಿ ಪರೀಕ್ಷೆಗಳನ್ನು ನಡೆಸುವುದಕ್ಕಾಗಿ ವ್ಯವಸ್ಥೆಗಳನ್ನು ಮಾಡುವುದು;

(v) ವಿಶ್ವವಿದ್ಯಾಲಯದ ಚರ ಮತ್ತು ಸ್ಥಿರ ಸ್ವತ್ತುಗಳೆರಡನ್ನೂ ಸ್ವೀಕರಿಸುವುದು, ಆರ್ಜಿಸುವುದು, ಧಾರಣ ಮಾಡುವುದು, ನಿಯಂತ್ರಿಸುವುದು ಮತ್ತು ಆಡಳಿತ ನಡೆಸುವುದು ಹಾಗೂ ವಿಶ್ವವಿದ್ಯಾಲಯದ ನಿಧಿಗಳನ್ನು ಸೂಕ್ತ ಯೋಜನೆಗಳಲ್ಲಿ ವಿವೇಕಯುತವಾಗಿ ಬಳಸುವುದು;

(vi) ವಿಶ್ವವಿದ್ಯಾಲಯದ ನಿಧಿಗಳು ಮತ್ತು ಸ್ವತ್ತುಗಳಿಗೆ ಸಂಬಂಧಿಸಿದ ಸರಿಯಾದ ಲೆಕ್ಕಪತ್ರಗಳನ್ನು ಇಡುವಂತೆ ಮಾಡುವುದು;

(vii) ಈ ಮುಂದಿನವುಗಳಿಗಾಗಿ ಫೀಜುಗಳನ್ನು ವಿಧಿಸುವುದು ಮತ್ತು ವಸೂಲಿ ಮಾಡುವುದು,–

(ಎ) ಪಾಠ ಮತ್ತು ಸಂಶೋಧನೆ;

(ಬಿ) ಪರೀಕ್ಷೆಗಳು ಮತ್ತು ಘಟಿಕೋತ್ಸವಗಳಿಗೆ ಪ್ರವೇಶ;

(ಸಿ) ವಿಶ್ವವಿದ್ಯಾಲಯವು ಕೈಗೊಳ್ಳಬಹುದಾದ ಅಂಥ ಇತರ ಸೇವೆಗಳು;

(ಡಿ) ಕಾಲೇಜುಗಳ ಮಾನ್ಯತೆ ಮತ್ತು ಪರಿವೀಕ್ಷಣೆ; ಮತ್ತು

(ಇ) ಪರಿನಿಯಮಗಳಿಂದ ನಿಯಮಿಸಬಹುದಾದಂಥ ಇತರ ಉದ್ದೇಶಗಳು;

(viii) ವಿಶ್ವವಿದ್ಯಾಲಯದ ಹಣಕಾಸು ಅಂದಾಜುಗಳನ್ನು ತಯಾರಿಸುವುದು ಮತ್ತು ಅದನ್ನು ಶೈಕ್ಷಣಿಕ ಪರಿಷತ್ತಿಗೆ ಒಪ್ಪಿಸುವುದು;

(ix) ವಿಶ್ವವಿದ್ಯಾಲಯವು ಸ್ಥಾಪಿಸಿದ ಅಥವಾ ನಿರ್ವಹಿಸುತ್ತಿರುವ ಸಂಸ್ಥೆಗಳು, ವಿದ್ಯಾರ್ಥಿನಿಲಯಗಳು, ಗ್ರಂಥಾಲಯಗಳು, ಪ್ರಯೋಗಶಾಲೆಗಳು, ವಸ್ತು ಸಂಗ್ರಹಾಲಯಗಳು ಮತ್ತು ಇತರ ಸಂಸ್ಥೆಗಳ ಆಡಳಿತ ನಡೆಸುವುದು ಮತ್ತು ನಿಯಂತ್ರಣ ಮಾಡುವುದು;

(x) ಸಂಸ್ಥೆಗಳ ಸಂಯೋಜನೆಯ ಸಂಬಂಧದಲ್ಲಿ ಪ್ರವೇಶ ನೀಡುವುದಕ್ಕಾಗಿ ಶಿಫಾರಸ್ಸುಗಳನ್ನು ಮಾಡುವುದು;

(xi) ವಿಶ್ವವಿದ್ಯಾಲಯದ ಆಡಳಿತದಲ್ಲಿ ಇಲ್ಲದಿರುವ ವಿದ್ಯಾರ್ಥಿನಿಲಯಗಳನ್ನು ಗುರುತಿಸಿ ಅಂಥ ಮನ್ನಣೆಯನ್ನು ಅಮಾನತ್ತುಗೊಳಿಸುವುದು ಅಥವಾ ಹಿಂತೆಗೆದುಕೊಳ್ಳುವುದು;

(xii) ಕ್ಯಾಂಪಸ್ ಮತ್ತು ಅದರ ಅನೆಕ್ಸ್‌ಗಳೊಳಗೆ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ನಿವಾಸ ಮತ್ತು ಶಿಸ್ತನ್ನು ವಿನಿಯಮನಗೊಳಿಸುವುದು, ಮೇಲ್ವಿಚಾರಣೆ ಮಾಡುವುದು ಮತ್ತು ನಿಯಂತ್ರಣ ಮಾಡುವುದು ಹಾಗೂ ಅವರ ಆರೋಗ್ಯ ಮತ್ತು ಯೋಗಕ್ಷೇಮವನ್ನು ನೋಡಿಕೊಳ್ಳುವುದು;

(xiii) ಉದ್ಯೋಗ ವಿಭಾಗ (ಬ್ಯೂರೋ) ಮತ್ತು ವಾರ್ತಾ ವಿಭಾಗವನ್ನು ರಚಿಸುವುದು, ಮತ್ತು ಅವುಗಳ ಕಾರ್ಯನಿರ್ವಹಣೆಯ ನಿಯಂತ್ರಣ ಮಾಡುವುದು;

(xiv) ಪರಿನಿಯಮಗಳ ಮೂಲಕ ನಿಯಮಿಸಬಹುದಾದಂತೆ ಅಂಥ ತನ್ನ ಪ್ರಕಾರ್ಯಗಳನ್ನು ಕುಲಪತಿಯವರಿಗೆ ಪ್ರತ್ಯಾಯೋಜಿಸುವುದು;

(xv) ವಿಶ್ವವಿದ್ಯಾಲಯಕ್ಕಾಗಿ ಸಾಮಾನ್ಯ ಮೊಹರನ್ನು ಆಯ್ಕೆ ಮಾಡುವುದು ಮತ್ತು ಅದರ ಅಭಿರಕ್ಷೆ ಮತ್ತು ಉಪಯೋಗಕ್ಕಾಗಿ ಉಪಬಂಧಿಸುವುದು;

(xvi) ವಿಶ್ವವಿದ್ಯಾಲಯದಿಂದ ಅಥವಾ ಅದರ ವಿರುದ್ಧ ಕಾನೂನು ವ್ಯವಹರಣೆ ನಡೆಸಲು ವ್ಯವಸ್ಥೆ ಮಾಡುವುದು;

(xvii) ಶೈಕ್ಷಣಿಕ ಪರಿಷತ್ತಿನ ಶಿಫಾರಸ್ಸಿನ ಮೇಲೆ ವಿಶ್ವವಿದ್ಯಾಲಯವು ಅಗತ್ಯಪಡಿಸಿದ ಪ್ರಾಧ್ಯಾಪಕರ, ಸಹ ಪ್ರಾಧ್ಯಾಪಕರ, ಸಹಾಯಕ ಪ್ರಾಧ್ಯಾಪಕರ ಅಥವಾ ಬೋಧಕರ ಯಾವುವೇ ಇತರ ಹುದ್ದೆಗಳನ್ನು ಪ್ರಾರಂಭಿಸುವುದು;

(xviii) ಶೈಕ್ಷಣಿಕ ಪರಿಷತ್ತಿನ ಶಿಫಾರಸ್ಸಿನ ಮೇಲೆ ಫೆಲೋಶಿಪ್‌ಗಳು, ಪ್ರವಾಸೀ ಫೆಲೋಶಿಪ್‌ಗಳು, ವಿದ್ಯಾರ್ಥಿ ವೇತನಗಳು, ಶಿಷ್ಯ ವೇತನಗಳು, ಪ್ರವೇತನಗಳು, ಪದಕಗಳು ಮತ್ತು ಪಾರಿತೋಷಕಗಳನ್ನು ಪ್ರಾರಂಭಿಸುವುದು.

(xix) ಶೈಕ್ಷಣಿಕ ಪರಿಷತ್ತಿನ ಶಿಫಾರಸ್ಸಿನ ಮೇಲೆ ಗೌರವ ಪದವಿಗಳು, ಬಿರುದುಗಳು ಅಥವಾ ಇತರೆ ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರದಾನ ಮಾಡುವುದು;

(xx) ಪರಿನಿಯಮಗಳನ್ನು ರಚಿಸುವುದು, ಅವುಗಳ ತಿದ್ದುಪಡಿ ಮಾಡುವುದು ಮತ್ತು ನಿರಸನಗೊಳಿಸುವುದು;

(xxi) ಶೈಕ್ಷಣಿಕ ಪರಿಷತ್ತಿನ ಶಿಫಾರಸ್ಸಿನ ಮೇಲೆ ಪ್ರೊಫೆಸರ್ ಎಮಿರಿಟಸ್ (ವಿಶ್ರಾಂತ ಮಹೋಪಾಧ್ಯಾಯ) ಬಿರುದನ್ನು ಪ್ರದಾನ ಮಾಡುವುದು;

(xxii) ಹುದ್ದೆಗಳ ಸೃಜನೆಗಾಗಿ ಪರಿನಿಯಮಗಳನ್ನು ಮಾಡುವುದು;

(xxiii) ಈ ಅಧ್ಯಾದೇಶ, ಪರಿನಿಯಮಗಳು, ಆರ್ಡಿನೆನ್ಸ್‌ಗಳು ಅಥವಾ ವಿನಿಯಮಗಳ ಮೂಲಕ ತನಗೆ ಪ್ರದಾನ ಮಾಡಬಹುದಾದ ಅಥವಾ ವಿಧಿಸಬಹುದಾದ ಅಂಥ ಇತರ ಅಧಿಕಾರಗಳನ್ನು ಚಲಾಯಿಸುವುದು ಮತ್ತು ಅಂಥ ಇತರ ಕರ್ತವ್ಯಗಳನ್ನು ನಿರ್ವಹಿಸುವುದು.

(3) (2)ನೇ ಉಪಪ್ರಕರಣದಲ್ಲಿ ಒಳಗೊಂಡಿರುವುದು ಯಾವುದೂ, ನೌಕರರ ವೇತನ ಶ್ರೇಣಿಗಳನ್ನು ಪರಿಷ್ಕರಿಸುವ ಅಥವಾ ಅವರಿಗೆ ಯಾವುವೇ ಭತ್ಯೆಗಳನ್ನು ಅಥವಾ ಉಪಲಬ್ಧಿಗಳನ್ನು ನೀಡುವ ಅಧಿಕಾರವನ್ನು ಸಿಂಡಿಕೇಟಿಗೆ ಪ್ರದಾನ ಮಾಡಿರುವುದಾಗಿ ಭಾವಿಸತಕ್ಕದ್ದಲ್ಲ.

**26. ಸಿಂಡಿಕೇಟ್ ಸಭೆ.–** (1) ನಿಯಮಿಸಬಹುದಾದ ಅಂಥ ಕಾಲಗಳಲ್ಲಿ ಮತ್ತು ಅಂಥ ಸ್ಥಳಗಳಲ್ಲಿ ಸಿಂಡಿಕೇಟ್ ಸಭೆ ಸೇರತಕ್ಕದ್ದು ಮತ್ತು (2) ಮತ್ತು (3)ನೇ ಉಪಪ್ರಕರಣಗಳ ಉಪಬಂಧಗಳಿಗೊಳಪಟ್ಟು, ಸಭೆಗಳಲ್ಲಿರಬೇಕಾದ ಗಣಪೂರ್ತಿಯೂ ಸೇರಿದಂತೆ ತನ್ನ ಸಭೆಗಳಲ್ಲಿನ ಕಾರ್ಯಕಲಾಪಗಳಿಗೆ ಸಂಬಂಧಪಟ್ಟಂತೆ ನಿಯಮಿಸಬಹುದಾದ ಅಂಥ ಪ್ರಕ್ರಿಯಾ ನಿಯಮಗಳನ್ನು ಪಾಲಿಸತಕ್ಕದ್ದು:

ಪರಂತು, ಸಿಂಡಿಕೇಟ್, ಕಡೇ ಪಕ್ಷ ಪ್ರತಿ ಮೂರು ತಿಂಗಳಿಗೆ ಒಮ್ಮೆಯಾದರೂ ಸಭೆ ಸೇರತಕ್ಕದ್ದು.

(2) ಕುಲಪತಿಯವರು ಅಥವಾ ಅವರ ಗೈರು ಹಾಜರಿಯಲ್ಲಿ, ಹಾಜರಿದ್ದ ಸದಸ್ಯರು ಆಯ್ಕೆ ಮಾಡಿದ ಯಾವೊಬ್ಬ ಸದಸ್ಯರು ಸಿಂಡಿಕೇಟ್ ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(3) ಸಿಂಡಿಕೇಟ್‌ನ ಯಾವುದೇ ಸಭೆಯಲ್ಲಿನ ಎಲ್ಲ ಪ್ರಶ್ನೆಗಳನ್ನು, ಹಾಜರಿದ್ದು ಮತ ನೀಡುವ ಸದಸ್ಯರ ಬಹುಮತದ ಮೂಲಕ ನಿರ್ಧರಿಸತಕ್ಕದ್ದು ಮತ್ತು ಸಮಾನ ಮತಗಳು ಬಿದ್ದ ಸಂದರ್ಭದಲ್ಲಿ ಕುಲಪತಿಯವರು ಅಥವಾ ಸಂದರ್ಭಾನುಸಾರ, ಅಧ್ಯಕ್ಷತೆ ವಹಿಸಿರುವ ಎರಡನೇ ಸದಸ್ಯರು ನಿರ್ಣಾಯಕ ಮತವನ್ನು ಚಲಾಯಿಸತಕ್ಕದ್ದು.

(4) (ಎ) ಸಿಂಡಿಕೇಟ್, ಸಮಾಲೋಚನೆಯ ಉದ್ದೇಶಕ್ಕಾಗಿ, ಪರಿಶೀಲನೆಯಲ್ಲಿರುವ ಯಾವುದೇ ವಿಷಯದಲ್ಲಿ ವಿಶೇಷ ಜ್ಞಾನವನ್ನು ಅಥವಾ ವ್ಯಾವಹಾರಿಕ ಅನುಭವವನ್ನು ಹೊಂದಿರುವ ಯಾವೊಬ್ಬ ವ್ಯಕ್ತಿಯನ್ನು ಯಾವುದೇ ಸಭೆಗೆ ಹಾಜರಾಗುವಂತೆ ಆಹ್ವಾನಿಸಬಹುದು ಅಥವಾ ವ್ಯಕ್ತಿಯು ಆ ಬಗ್ಗೆ ಮಾತನಾಡಬಹುದು ಮತ್ತು ಸಭೆಯ ವ್ಯವಹರಣೆಗಳಲ್ಲಿ ಅನ್ಯಥಾ ಭಾಗವಹಿಸಬಹುದು. ಆದರೆ ಅವರು ಮತ ನೀಡಲು ಹಕ್ಕುಳ್ಳವರಾಗಿರತಕ್ಕದ್ದಲ್ಲ.

(ಬಿ) ಹಾಗೆ ಆಹ್ವಾನಿತರಾದ ವ್ಯಕ್ತಿಯು, ಸಿಂಡಿಕೇಟ್ ಸದಸ್ಯರಿಗೆ ಅನುಮತಿಸಬಹುದಾದ ಅಂಥ ದಿನಭತ್ಯೆ ಮತ್ತು ಪ್ರಯಾಣ ಭತ್ಯೆಗಳಿಗೆ ಹಕ್ಕುಳ್ಳವರಾಗಿರತಕ್ಕದ್ದು.

**27. ಶೈಕ್ಷಣಿಕ ಪರಿಷತ್ತು.–** (ಶೈಕ್ಷಣಿಕ ಪರಿಷತ್ತು ಈ ಕೆಳಕಂಡ ಸದಸ್ಯರನ್ನು ಒಳಗೊಂಡಿರತಕ್ಕದ್ದು ಎಂದರೆ:–

(i) ಕುಲಪತಿ;

(ii) ಮೂರು ವರ್ಷಗಳಿಗೆ ಮೀರದ ಅವಧಿಗಾಗಿ ಸರ್ಕಾರದಿಂದ ನಾಮನಿರ್ದೇಶಿತರಾದ ಜಾನಪದ ಕ್ಷೇತ್ರದಲ್ಲಿ ಅಸಾಧಾರಣ ಸೇವೆ ಸಲ್ಲಿಸಿದ ಐವರು ತಜ್ಞರು;

(iii) ಕುಲಪತಿಯವರು ಜ್ಯೇಷ್ಠತೆಗೆ ಅನುಸಾರವಾಗಿ ಎರಡು ವರ್ಷಗಳ ಅವಧಿಗಾಗಿ ಸರದಿಯ ಮೇಲೆ ನಾಮನಿರ್ದೇಶನ ಮಾಡಿದ ವ್ಯಾಸಂಗ ವಿಭಾಗಗಳ ಇಬ್ಬರು ಡೀನರುಗಳು;

(iv) ಕುಲಪತಿಯವರು ಜ್ಯೇಷ್ಠತೆಗೆ ಅನುಸಾರವಾಗಿ ಎರಡು ವರ್ಷಗಳ ಅವಧಿಗಾಗಿ ಸರದಿಯ ಮೇಲೆ ನಾಮನಿರ್ದೇಶನ ಮಾಡಿದ ವ್ಯಾಸಂಗ ವಿಭಾಗಗಳ ಮೂವರು ಪ್ರಾಧ್ಯಾಪಕರು;

(v) ಮೂರು ವರ್ಷಗಳ ಅವಧಿಗಾಗಿ ಸರ್ಕಾರವು ನಾಮನಿರ್ದೇಶನ ಮಾಡಿದ ಆರು ಜನ ಸುಪ್ರಸಿದ್ಧ ಜಾನಪದ ತಜ್ಞರು ಅವರ ಪೈಕಿ ಅನುಸೂಚಿತ ಜಾತಿಗಳು ಅಥವಾ ಅನುಸೂಚಿತ ಪಂಗಡಗಳಿಗೆ ಸೇರಿದ ಒಬ್ಬರು, ಇತರ ಹಿಂದುಳಿದ ವರ್ಗಗಳಿಗೆ ಸೇರಿದ ಒಬ್ಬರು, ಮಹಿಳೆಯರನ್ನು ಪ್ರತಿನಿಧಿಸುವ ಒಬ್ಬರು, ಧಾರ್ಮಿಕ ಅಲ್ಪಸಂಖ್ಯಾತರನ್ನು ಪ್ರತಿನಿಧಿಸುವ ಒಬ್ಬರು ಮತ್ತು ಇತರರನ್ನು ಪ್ರತಿನಿಧಿಸುವ ಇಬ್ಬರು;

(vi) ಕರ್ನಾಟಕ ಜಾನಪದ ಅಕಾಡೆಮಿ ಅಧ್ಯಕ್ಷರು;

(vii) ಕರ್ನಾಟಕ ಯಕ್ಷಗಾನ ಬಯಲಾಟ ಅಕಾಡೆಮಿ ಅಧ್ಯಕ್ಷರು;

(viii) ತುಳು ಅಕಾಡೆಮಿಯ ಅಧ್ಯಕ್ಷರು;

(ix) ಕೊಡವ ಅಕಾಡೆಮಿಯ ಅಧ್ಯಕ್ಷರು;

(x) ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು;

(xi) ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರು;

(xii) ಕರ್ನಾಟಕ ಲಲಿತ ಕಲಾ ಅಕಾಡೆಮಿಯ ಅಧ್ಯಕ್ಷರು;

(xiii) ಅಧ್ಯಯನಾಂಗ, ಯೋಜನೆ, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ ಮಂಡಳಿಯ ನಿರ್ದೇಶಕರು;

(xiv) ಕುಲಸಚಿವರು, ಸದಸ್ಯ–ಕಾರ್ಯದರ್ಶಿ:

ಪರಂತು, ವಿಶ್ವವಿದ್ಯಾಲಯದಲ್ಲಿ ಯಾವುದೇ ಸಾಮರ್ಥ್ಯದಲ್ಲಿ ನೌಕರಿಯಲ್ಲಿರುವ ಯಾವೊಬ್ಬ ವ್ಯಕ್ತಿಯೂ ನಾಮನಿರ್ದೇಶಿತರಾಗಲು ಅರ್ಹರಾಗತಕ್ಕದ್ದಲ್ಲ.

(2) ಶೈಕ್ಷಣಿಕ ಪರಿಷತ್ತು, ಶೈಕ್ಷಣಿಕ ವರ್ಷದಲ್ಲಿ ಕನಿಷ್ಠ ನಾಲ್ಕು ಬಾರಿಯಾದರೂ ಸಭೆ ಸೇರತಕ್ಕದ್ದು. ಆದಾಗ್ಯೂ ಎರಡು ನಿರಂತರ ಸಭೆಗಳ ನಡುವಣ ಅವಧಿಯು ಮೂರು ತಿಂಗಳುಗಳನ್ನು ಮೀರತಕ್ಕದ್ದಲ್ಲ.

**28. ಶೈಕ್ಷಣಿಕ ಪರಿಷತ್ತಿನ ಅಧಿಕಾರಗಳು.–** (1) ಶೈಕ್ಷಣಿಕ ಪರಿಷತ್ತು ವಿಶ್ವವಿದ್ಯಾಲಯದ ಶೈಕ್ಷಣಿಕ ನಿಕಾಯವಾಗಿರತಕ್ಕದ್ದು ಮತ್ತು ಈ ಅಧ್ಯಾದೇಶದ, ಪರಿನಿಯಮಗಳ, ಆರ್ಡಿನೆನ್ಸ್‌ಗಳ ಮತ್ತು ವಿನಿಯಮಗಳ ಉಪಬಂಧಗಳಿಗೊಳಪಟ್ಟು ವಿಶ್ವವಿದ್ಯಾಲಯದ ಶಿಕ್ಷಣ, ವಿದ್ಯಾಭ್ಯಾಸ ಮತ್ತು ಪರೀಕ್ಷೆಗಳ ನಿಯಂತ್ರಣ ಹಾಗೂ ಸಾಮಾನ್ಯ ವಿನಿಯಮವನ್ನು ಹೊಂದಿರತಕ್ಕದ್ದು ಮತ್ತು ಅವುಗಳ ಗುಣಮಟ್ಟಗಳನ್ನು ಕಾಪಾಡುವ ಜವಾಬ್ದಾರಿ ಹೊಂದಿರತಕ್ಕದ್ದು.

(2) ಹಿಂದೆ ಹೇಳಿದ ಅಧಿಕಾರಗಳ ಸಾಮಾನ್ಯಾನ್ವಯಕ್ಕೆ ಬಾಧಕವಾಗದಂತೆ ಹಾಗೂ ಈ ಅಧ್ಯಾದೇಶದ ಉಪಬಂಧಗಳ ಮೂಲಕ ಅಥವಾ ಅದರ ಅಡಿಯಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಷರತ್ತುಗಳಿಗೊಳಪಟ್ಟು ಶೈಕ್ಷಣಿಕ ಪರಿಷತ್ತು ಈ ಮುಂದಿನ ಅಧಿಕಾರಗಳನ್ನು ಚಲಾಯಿಸತಕ್ಕದ್ದು, ಎಂದರೆ:–

(i) ಶೈಕ್ಷಣಿಕ ವಿಷಯಗಳಿಗೆ ಸಂಬಂಧಿಸಿದಂತೆ ಆರ್ಡಿನೆನ್ಸ್‌ಗಳನ್ನು ಹೊರಡಿಸಲು ಪ್ರಸ್ತಾವಗಳನ್ನು ಮಾಡುವುದು;

(ii) ಆರ್ಡಿನೆನ್ಸ್‌ನಲ್ಲಿ ಒಳಗೊಂಡಿರದಷ್ಟರಮಟ್ಟಿಗೆ ಅಧ್ಯಯನ ಕ್ರಮಗಳಿಗೆ ಸಂಬಂಧಿಸಿದಂತೆ ವಿನಿಯಮಗಳನ್ನು ರಚಿಸುವುದು;

(iii) ಪರೀಕ್ಷೆಗಳ ಸ್ಕೀಂಗಳಿಗೆ ಮತ್ತು ಯಾವ ಷರತ್ತುಗಳಿಗೆ ಒಳಪಟ್ಟು ಪರೀಕ್ಷೆಗಳು, ಪದವಿಗಳು, ಡಿಪ್ಲೊಮಾಗಳು, ಪ್ರಮಾಣ ಪತ್ರಗಳು ಅಥವಾ ಶೈಕ್ಷಣಿಕ ಪ್ರಶಸ್ತಿಗಳಿಗಾಗಿ, ವಿದ್ಯಾರ್ಥಿಗಳಿಗೆ ಪ್ರವೇಶ ಕೊಡತಕ್ಕದ್ದೋ, ಅಂಥ ಷರತ್ತುಗಳಿಗೆ ಸಂಬಂಧಿಸಿದಂತೆ ವಿನಿಯಮಗಳನ್ನು ರಚಿಸುವುದು;

(iv) ವಿಶ್ವವಿದ್ಯಾಲಯದ ವಿವಿಧ ಪರೀಕ್ಷೆಗಳ ಫಲಿತಾಂಶಗಳನ್ನು ಘೋಷಿಸುವುದಕ್ಕಾಗಿ ವಿನಿಯಮಗಳನ್ನು ರಚಿಸುವುದು;

(v) ಮನ್ನಣೆ ಪಡೆದ ಸಂಸ್ಥೆಗಳಲ್ಲಿ ಅಧ್ಯಯನ ಹಾಗೂ ಬೋಧನೆಯ ಸಮನ್ವಯತೆಗಾಗಿ ವ್ಯವಸ್ಥೆ ಮಾಡುವುದು;

(vi) ವಿಶ್ವವಿದ್ಯಾಲಯದಲ್ಲಿ ಸಂಶೋಧನೆಯನ್ನು ಉತ್ತೇಜಿಸುವುದಕ್ಕಾಗಿ ಅಥವಾ ಇತರ ವಿಶೇಷ ಅಧ್ಯಯನಗಳನ್ನು ಪ್ರೋತ್ಸಾಹಿಸುವುದಕ್ಕಾಗಿ ಸ್ಕೀಂಗಳನ್ನು ರೂಪಿಸುವುದು;

(vii) ವ್ಯಾಸಂಗ ವಿಭಾಗಗಳಿಗೆ ವಿಷಯಗಳನ್ನು ಹಂಚಿಕೆ ಮಾಡಲು ಮತ್ತು ವ್ಯಾಸಂಗ ವಿಭಾಗಗಳಿಗೆ ತಮ್ಮದೇ ಆದ ಸದಸ್ಯರುಗಳನ್ನು ನೇಮಿಸುವುದಕ್ಕೆ ಪ್ರಸ್ತಾವಗಳನ್ನು ಮಾಡುವುದು;

(viii) ಪರೀಕ್ಷೆಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಸಂಬಂಧಪಟ್ಟಂತೆ ವಿನಾಯಿತಿಗಳ ನೀಡಿಕೆಗಾಗಿ ಮಾನದಂಡಗಳನ್ನು ನಿರ್ಣಯಿಸುವುದು;

(ix) ವಿಶ್ವವಿದ್ಯಾಲಯಕ್ಕೆ ಅಗತ್ಯವಿರುವ ಪ್ರಾಧ್ಯಾಪಕರುಗಳ, ಸಹ ಪ್ರಾಧ್ಯಾಪಕರುಗಳ, ಸಹಾಯಕ ಪ್ರಾಧ್ಯಾಪಕರುಗಳ ಮತ್ತು ಇತರ ಅಧ್ಯಾಪಕರ ಹುದ್ದೆಗಳನ್ನು ಪ್ರಾರಂಭ ಮಾಡುವುದಕ್ಕಾಗಿ ಮತ್ತು ಅಂಥ ಹುದ್ದೆಗಳ ಕರ್ತವ್ಯಗಳನ್ನು ನಿಯಮಿಸುವುದಕ್ಕಾಗಿ ಪ್ರಸ್ತಾವಗಳನ್ನು ಮಾಡುವುದು;

(x) ಸಂಶೋಧನಾ ವೇತನಗಳು, ವಿದ್ಯಾರ್ಥಿ ವೇತನಗಳು, ಶಿಷ್ಯವೇತನಗಳು ಅಥವಾ ಪ್ರವೇತನಗಳನ್ನು ಪ್ರಾರಂಭಿಸುವುದಕ್ಕಾಗಿ ಮತ್ತು ಅವುಗಳನ್ನು ನೀಡುವುದಕ್ಕಾಗಿ ಪ್ರಸ್ತಾವನೆಗಳನ್ನು ಮಾಡುವುದು;

(xi) ಪರೀಕ್ಷೆಗಳ ಸಮಾನತೆಯನ್ನು ನಿಯಮಿಸಲು ವಿನಿಯಮಗಳನ್ನು ರಚಿಸುವುದು;

(xii) ಪದವಿಗಳು, ಡಿಪ್ಲೊಮಾಗಳು ಮತ್ತು ಇತರ ಶೈಕ್ಷಣಿಪ್ರಶಸ್ತಿಗಳಿಗೆ ಅರ್ಹತೆಯನ್ನು ಪಡೆಯುವುದಕ್ಕೆ ಸಂಬಂಧಿಸಿದಂತೆ ವಿಶ್ವವಿದ್ಯಾಲಯದಲ್ಲಿ ಅಥವಾ ಮನ್ನಣೆ ಪಡೆದ ಸಂಸ್ಥೆಗಳಲ್ಲಿ ನಡೆಯುವ ಅನುಮೋದಿತ ಅಧ್ಯಯನ ಕ್ರಮಗಳಿಂದ ವಿನಾಯಿತಿಗಳನ್ನು ನೀಡುವುದಕ್ಕಾಗಿ ವಿನಿಯಮಗಳನ್ನು ರಚಿಸುವುದು;

(xiii) ಸಂಶೋಧನೆ ಮತ್ತು ಕಲಿಕೆಯ ಪ್ರಗತಿಗಾಗಿ ಮತ್ತು ಪ್ರಸಾರಕ್ಕಾಗಿ ಸೂಕ್ತವೆಂದು ಭಾವಿಸಬಹುದಾದಂಥ ಕಲಿಕೆ ಮತ್ತು ಅಧ್ಯಯನ ಕ್ರಮಗಳ ಅಂಥ ವಿಭಾಗಗಳಲ್ಲಿ ಶಿಕ್ಷಣ, ಭೋಧನೆ ಮತ್ತು ತರಬೇತಿಗಾಗಿ ಅವಕಾಶ ಕಲ್ಪಿಸುವುದು;

(xiv) ವಿಶೇಷ ಕಲಾ ಪ್ರಕಾರಗಳ ತರಬೇತಿಯನ್ನು ಕೈಗೊಳ್ಳಲು ಮನ್ನಣೆ ಪಡೆದ ಸಂಸ್ಥೆಗಳನ್ನು ಸಮರ್ಥಗೊಳಿಸುವಂತೆ ಮಾಡಲು ಅಂಥ ಉಪಬಂಧಗಳನ್ನು ರಚಿಸುವುದು;

(xv) ವಾರ್ಷಿಕ ಹಣಕಾಸು ಅಂದಾಜುಗಳನ್ನು ಪರಿಗಣಿಸುವುದು;

(xvi) ಯಾವುದೇ ವಿನಿಯಮವನ್ನು ತಿದ್ದುಪಡಿ ಮಾಡುವುದು ಅಥವಾ ನಿರಸನಗೊಳಿಸುವುದು;

(xvii) ವಿಶ್ವವಿದ್ಯಾಲಯದ ವಿವಿಧ ಪ್ರಾಧಿಕಾರಗಳಿಗೆ ಸದಸ್ಯರುಗಳನ್ನು ನಾಮನಿರ್ದೇಶಿಸುವುದು;

(xviii) ಈ ಅಧ್ಯಾದೇಶ ಅಥವಾ ಅದರ ಅಡಿಯಲ್ಲಿ ರಚಿಸಿದ ಪರಿನಿಯಮಗಳು, ಆರ್ಡಿನೆನ್ಸ್‌ಗಳು ಅಥವಾ ನಿಯಮಗಳಿಂದ ಅದಕ್ಕೆ ಪ್ರದಾನ ಮಾಡಬಹುದಾದ ಅಂಥ ಇತರ ಅಧಿಕಾರಗಳನ್ನು ಚಲಾಯಿಸುವುದು ಮತ್ತು ಅದರ ಮೇಲೆ ವಿಧಿಸಬಹುದಾದ ಅಂಥ ಇತರ ಕರ್ತವ್ಯಗಳನ್ನು ನೆರವೇರಿಸುವುದು;

(xix) ಸಂಶೋಧನಾ ಮತ್ತು ವಿಶೇಷ ಅಧ್ಯಯನಗಳ ವಿಭಾಗಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು; ಮತ್ತು

(xx) ಜಾನಪದ ಕ್ಷೇತ್ರದಲ್ಲಿನ ಸಂರಕ್ಷಣೆ, ಸಂವರ್ಧನೆ, ತರಬೇತಿಗೆ ಸಂಬಂಧಿಸಿದ ಎಲ್ಲ ವಿಷಯಗಳ ಬಗ್ಗೆ ಸಾಮಾನ್ಯವಾಗಿ ವಿಶ್ವವಿದ್ಯಾಲಯಕ್ಕೆ ಸಲಹೆ ನೀಡುವುದು.

**29. ಹಣಕಾಸು ಸಮಿತಿ.–** (1) ಹಣಕಾಸು ಸಮಿತಿಯು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಪತಿ;

(ii) ಹಣಕಾಸಿನ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ ಅಥವಾ ಉಪಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಅವರ ನಾಮನಿರ್ದೇಶಿತ;

(iii) ಶಿಕ್ಷಣದ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ ಅಥವಾ ಉಪಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಅವರ ನಾಮನಿರ್ದೇಶಿತ;

(iv) ಯೋಜನಾ ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ ಅಥವಾ ಉಪಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಅವರ ನಾಮನಿರ್ದೇಶಿತ;

(v) ಸಿಂಡಿಕೇಟ್ ನಾಮನಿರ್ದೇಶಿಸಿದ ಇಬ್ಬರು ಸದಸ್ಯರು ಅದರಲ್ಲಿ ಒಬ್ಬರು ಪ್ರಾಧ್ಯಾಪಕರಾಗಿರತಕ್ಕದ್ದು ಮತ್ತು ಇನ್ನೊಬ್ಬರು ಸಿಂಡಿಕೇಟ್‌ಗೆ ಕುಲಾಧಿಪತಿಯವರಿಂದ ನಾಮನಿರ್ದೇಶಿತರಾದ ವ್ಯಕ್ತಿಯಾಗಿರತಕ್ಕದ್ದು;

(vi) ಶೈಕ್ಷಣಿಕ ಪರಿಷತ್ತಿನಿಂದ ನಾಮನಿರ್ದೇಶಿತರಾದ ಒಬ್ಬ ಸದಸ್ಯರು;

(vii) ಕುಲಸಚಿವರು.

(2) ಯಾವುದೇ ಕಾರಣದಿಂದಾಗಿ (1)ನೇ ಉಪ–ಪ್ರಕರಣದ (ii)ನೇ ಖಂಡ, (iii)ನೇ ಖಂಡ ಅಥವಾ (iv)ನೇ ಖಂಡದಲ್ಲಿ ಉಲ್ಲೇಖಿಸಲಾದ ಅಧಿಕಾರಿಯು ಹಣಕಾಸು ಸಮಿತಿಯ ಯಾವುದೇ ಸಭೆಗೆ ಹಾಜರಾಗಲು ಅಸಮರ್ಥರಾದರೆ ಅವರು ಸರ್ಕಾರದ ಉಪ–ಕಾರ್ಯದರ್ಶಿ ದರ್ಜೆಗೆ ಕಡಿಮೆಯದಲ್ಲದ ದರ್ಜೆಯ ತನ್ನ ಇಲಾಖೆಯ ಯಾವೊಬ್ಬ ಅಧಿಕಾರಿಯನ್ನು ಅಂಥ ಸಭೆಯಲ್ಲಿ ಹಾಜರಿರಲು ಪ್ರತಿನಿಯೋಜಿಸಬಹುದು. ಅಧಿಕಾರಿಯು ಅಥವಾ ಪ್ರತಿನಿಯೋಜಿತ ವ್ಯಕ್ತಿಯು ಸಮಿತಿಯ ಚರ್ಚೆಗಳಲ್ಲಿ ಭಾಗವಹಿಸಲು ಮತ್ತು ಮತ ನೀಡಲು ಹಕ್ಕುಳ್ಳವರಾಗಿರತಕ್ಕದ್ದು.

(3) ಹಣಕಾಸು ಸಮಿತಿಯು ಕನಿಷ್ಠ ಮೂರು ತಿಂಗಳಿಗೆ ಒಂದು ಬಾರಿಯಾದರೂ ಸಭೆ ಸೇರತಕ್ಕದ್ದು.

(4) ಹಣಕಾಸು ಸಮಿತಿಯು ಈ ಮುಂದಿನ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯದ ಲೆಕ್ಕ ಪತ್ರಗಳ ಸಾಮಾನ್ಯ ಪರಿಶೀಲನೆಗಳನ್ನು ನಡೆಸುವುದು, ವಾರ್ಷಿಕ ಲೆಕ್ಕ ಪರಿಶೋಧನೆಯ ವರದಿಗಳನ್ನು ಪುನರಾವಲೋಕಿಸುವುದು ಮತ್ತು ಅದರ ಮೇಲೆ ತನ್ನ ಶಿಫಾರಸುಗಳನ್ನು ಮಾಡುವುದು;

(ii) ವಾರ್ಷಿಕ ಬಜೆಟ್ ಅಂದಾಜುಗಳನ್ನು ಪರಿಶೀಲಿಸುವುದು ಮತ್ತು ಶೈಕ್ಷಣಿಕ ಪರಿಷತ್ತು ಮತ್ತು ಸಿಂಡಿಕೇಟಿಗೆ ಅದರ ಶಿಫಾರಸುಗಳನ್ನು ಮಾಡುವುದು;

(iii) ಬಜೆಟ್‌ನಲ್ಲಿ ಒದಗಿಸಿಲ್ಲದ ವೆಚ್ಚವನ್ನು ಒಳಗೊಂಡ ಅಥವಾ ವಿಶ್ವವಿದ್ಯಾಲಯದಲ್ಲಿ ಹುದ್ದೆಗಳ ಸೃಜನೆ, ಮೇಲ್ದರ್ಜೆಗೇರಿಸುವುದು ಮತ್ತು ರದ್ದು ಮಾಡುವುದು ಒಳಗೊಂಡಂತೆ ಬಜೆಟ್‌ನಲ್ಲಿ ಒದಗಿಸಿದ ಮೊಬಲಗಿಗಿಂತ ಹೆಚ್ಚುವರಿ ವೆಚ್ಚವನ್ನು ಒಳಗೊಂಡ ವಿಶ್ವವಿದ್ಯಾಲಯದ ಎಲ್ಲ ಪ್ರಸ್ತಾವಗಳನ್ನು ಪರಿಶೀಲಿಸುವುದು;

(iv) ಪರಿನಿಯಮಗಳ ಮೂಲಕ ನಿಯಮಿಸಬಹುದಾದಂಥ ಇತರ ಪ್ರಕಾರ್ಯಗಳು.

(5) (4)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಕುಲಪತಿಯು ತುರ್ತು ಸಂದರ್ಭಗಳಲ್ಲಿ ಮತ್ತು ಲಿಖಿತದಲ್ಲಿ ಕಾರಣಗಳನ್ನು ದಾಖಲು ಮಾಡಿ, ಹಣಕಾಸು ಸಮಿತಿಯ ಒಪ್ಪಿಗೆ ಇಲ್ಲದೆ, ಬಜೆಟ್‌ನಲ್ಲಿ ಹಣ ಒದಗಿಸಿಲ್ಲದ ಅಥವಾ ಬಜೆಟ್‌ನಲ್ಲಿ ಒದಗಿಸಿದ ಹಣಕ್ಕಿಂತ ಹೆಚ್ಚುವರಿಯಾದ ಯಾವುದೇ ಒಂದು ಸಂದರ್ಭದಲ್ಲಿ, ಒಂದು ಲಕ್ಷ ರೂಪಾಯಿಗಳಿಗೆ ಮೀರದ ಯಾವುದೇ ವೆಚ್ಚವನ್ನು ವಹಿಸಬಹುದು:

ಪರಂತು, ಅಂಥ ವೆಚ್ಚವನ್ನು ಸ್ಥಿರೀಕರಣಕ್ಕಾಗಿ ಹಣಕಾಸು ಸಮಿತಿಯ, ಮುಂದಿನ ನಿಕಟ ತರುವಾಯದ ತ್ರೈಮಾಸಿಕ ಸಭೆಯಲ್ಲಿ ಮಂಡಿಸತಕ್ಕದ್ದು:

ಮತ್ತು ಪರಂತು, ಕುಲಪತಿಯವರ ಮೂಲಕ ವೆಚ್ಚದ ಭರಿಸುವಿಕೆಯು ತೃಪ್ತಿಕರವಾಗಿಲ್ಲದಿದ್ದಲ್ಲಿ, ಹಣಕಾಸು ಸಮಿತಿಯು ಅದನ್ನು ಕುಲಾಧಿಪತಿಯವರಿಗೆ ಉಲ್ಲೇಖಿಸಬಹುದು. ಈ ವಿಷಯದಲ್ಲಿ ಅವರ ತೀರ್ಮಾನವೇ ಅಂತಿಮವಾಗಿರತಕ್ಕದ್ದು.

(6) ಹಣಕಾಸು ಸಮಿತಿಯು ಪರಿಗಣಿಸಿದ, ಯಾವುದೇ ವಿಷಯದ ಸಂದರ್ಭದಲ್ಲಿ ಮತಗಳು ಸಮಾನವಾಗಿ ವಿಭಾಗವಾಗಿರುವಲ್ಲಿ ಕುಲಪತಿಯವರು ನಿರ್ಣಾಯಕ ಮತವನ್ನು ಹೊಂದಿರತಕ್ಕದ್ದು.

**30. ವ್ಯಾಸಂಗ ವಿಭಾಗಗಳ ರಚನೆ ಮತ್ತು ಅವುಗಳ ಪ್ರಕಾರ್ಯಗಳು.–** (1) ವಿಶ್ವವಿದ್ಯಾಲಯವು, ಮೌಖಿಕ ಜಾನಪದ ಕಲೆಗಳು, ಸಾಹಿತ್ಯ, ಸಂಗೀತ, ಕರಕುಶಲ, ವೈದ್ಯ ಪದ್ಧತಿ, ಆಹಾರ, ಗುಡಿಕೈಗಾರಿಕೆಗಳು, ಪರಂಪರೆ, ವಿಜ್ಞಾನ ಮತ್ತು ತಂತ್ರಜ್ಞಾನ, ಅಲಕ್ಷಿತ ಅಧ್ಯಯನಗಳು ಮತ್ತು ಆನ್ವಯಿಕ ಜಾನಪದ

ಅಧ್ಯಯನದಂಥ ವಿವಿಧ ಕ್ಷೇತ್ರಗಳ ವ್ಯಾಸಂಗ ಕ್ರಮಗಳನ್ನು ಹಾಗೂ ಕಾಲಕಾಲಕ್ಕೆ ಪರಿನಿಯಮಗಳ ಮೂಲಕ ನಿಯಮಿಸಬಹುದಾದ ಅಂಥ ಇತರ ವಿಷಯಗಳನ್ನು ಹೊಂದಿರತಕ್ಕದ್ದು.

(2) ಪ್ರತಿಯೊಂದು ವ್ಯಾಸಂಗ ವಿಭಾಗವು ಆರ್ಡಿನೆನ್ಸ್ ಮೂಲಕ ಅದಕ್ಕೆ ವಹಿಸಿಕೊಡಬಹುದಾದ ಅಂಥ ಸಂಖ್ಯೆಯ ಅಧ್ಯಯನ ವಿಭಾಗಗಳನ್ನು ಒಳಗೊಂಡಿರತಕ್ಕದ್ದು.

(3) ಪ್ರತಿಯೊಂದು ವ್ಯಾಸಂಗ ವಿಭಾಗದ ಅಧ್ಯಯನ ವಿಭಾಗವು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:-

(i) ವ್ಯಾಸಂಗ ವಿಭಾಗದ ಡೀನ್;

(ii) ಅಧ್ಯಯನಾಂಗದ ನಿರ್ದೇಶಕರು;

(iii) ವಿಭಾಗದ ಅಧ್ಯಕ್ಷರು;

(iv) ವಿಭಾಗಕ್ಕೆ ಸಂಬಂಧಪಟ್ಟ ಗೌರವ ಪ್ರಾಧ್ಯಾಪಕರು, ಯಾರಾದರೂ ಇದ್ದರೆ;

(v) ವಿಭಾಗದಲ್ಲಿ ಸಂಶೋಧನೆಗಳನ್ನು ನಡೆಸಲು ನೇಮಿಸಲಾದ ವ್ಯಕ್ತಿಗಳು;

(vi) ಆರ್ಡಿನೆನ್ಸ್‌ನಲ್ಲಿ ನಿಯಮಿಸಬಹುದಾದಂತೆ ವಿಭಾಗದ ಸದಸ್ಯರಾಗಿರುವ ಅಂಥ ಇತರ ವ್ಯಕ್ತಿಗಳು.

(4) ಯಾವುದೇ ಅಧ್ಯಯನ ವಿಭಾಗವನ್ನು ಪರಿನಿಯಮಗಳ ಮೂಲಕ ಸ್ಥಾಪಿಸಬಹುದು ಅಥವಾ ರದ್ದುಗೊಳಿಸಬಹುದು.

(5) ಪ್ರತಿಯೊಂದು ಅಧ್ಯಯನ ವಿಭಾಗವು ಒಬ್ಬ ಅಧ್ಯಕ್ಷರನ್ನು ಹೊಂದಿರತಕ್ಕದ್ದು ಹಾಗೂ ಅವರು ವಿಭಾಗೀಯ ಪರಿಷತ್ತಿನ ಅಧ್ಯಕ್ಷರೂ ಕೂಡ ಆಗಿರತಕ್ಕದ್ದು.

(6) ಪ್ರತಿಯೊಂದು ಅಧ್ಯಯನ ವಿಭಾಗವು ಈ ಮುಂದಿನವರನ್ನು ಒಳಗೊಂಡ ಒಂದು ವಿಭಾಗೀಯ ಪರಿಷತ್ತನ್ನು ಹೊಂದಿರತಕ್ಕದ್ದು.-

(i) ಎಲ್ಲಾ ಪ್ರಾಧ್ಯಾಪಕರು ಮತ್ತು ಸಹ ಪ್ರಾಧ್ಯಾಪಕರು;

(ii) ವಿಭಾಗದಲ್ಲಿನ ಒಬ್ಬರು ಅತ್ಯಂತ ಹಿರಿಯ ಸಹಾಯಕ ಪ್ರಾಧ್ಯಾಪಕರು;

(iii) ಅಧ್ಯಯನಾಂಗದ ನಿರ್ದೇಶಕರು.

(7) ಅಧ್ಯಕ್ಷರು, ಸಿಂಡಿಕೇಟಿನ ಮೂಲಕ ಎರಡು ವರ್ಷಗಳ ಅವಧಿಗಾಗಿ ಅಥವಾ ಕಾಲಕಾಲಕ್ಕೆ ಸಿಂಡಿಕೇಟ್ ನಿರ್ಧರಿಸಬಹುದಾದಂತೆ ಅಂಥ ಇತರ ಅವಧಿಗಾಗಿ ನೇಮಕರಾಗತಕ್ಕದ್ದು.

(8) ಅಧ್ಯಕ್ಷರು, ವಿಭಾಗದ ಆಡಳಿತದ ಪ್ರಭಾರವನ್ನು ವಹಿಸತಕ್ಕದ್ದು, ವಿಭಾಗೀಯ ಪರಿಷತ್ತಿನ ಮತ್ತು ಅಧ್ಯಕ್ಷರ ಅಧಿಕಾರಗಳು, ಕರ್ತವ್ಯಗಳು ಮತ್ತು ಪ್ರಕಾರ್ಯಗಳು, ಪರಿನಿಯಮಗಳ ಮೂಲಕ ನಿಯಮಿಸಿದಂತೆ ಇರತಕ್ಕದ್ದು.

(9) ಪ್ರತಿಯೊಂದು ಫ್ಯಾಕಲ್ಟಿಯು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:-

(i) ವ್ಯಾಸಂಗ ವಿಭಾಗದ ಡೀನ್;

(ii) ಕುಲಸಚಿವರು;

(iii) ವ್ಯಾಸಂಗ ವಿಭಾಗದಲ್ಲಿನ ಅಧ್ಯಯನ ವಿಭಾಗಗಳ ಅಧ್ಯಕ್ಷರು;

(iv) ಎಲ್ಲಾ ಪ್ರಾಧ್ಯಾಪಕರು ಮತ್ತು ಪ್ರಾಧ್ಯಾಪಕರ ಗೈರು ಹಾಜರಿಯಲ್ಲಿ ವ್ಯಾಸಂಗ ವಿಭಾಗದಲ್ಲಿನ ಪ್ರತಿಯೊಂದು ವಿಭಾಗದ ಸಹ ಪ್ರಾಧ್ಯಾಪಕರು;

(v) ಕುಲಪತಿಯು ಎರಡು ವರ್ಷಗಳ ಅವಧಿಗಾಗಿ ಸೇವಾ ಜ್ಯೇಷ್ಠತೆಗೆ ಅನುಸಾರವಾಗಿ ಸರದಿಯ ಮೇಲೆ ಪ್ರತಿಯೊಂದು ವ್ಯಾಸಂಗ ವಿಭಾಗದ ಅಧ್ಯಯನ ವಿಭಾಗದಿಂದ ನಾಮನಿರ್ದೇಶನ ಮಾಡಿದ ಒಬ್ಬ ಸಹ ಪ್ರಾಧ್ಯಾಪಕರು ಮತ್ತು ಒಬ್ಬ ಸಹಾಯಕ ಪ್ರಾಧ್ಯಾಪಕರು;

(vi) ಎರಡು ವರ್ಷಗಳ ಅವಧಿಗಾಗಿ ಕುಲಪತಿಯು ನಾಮನಿರ್ದೇಶನ ಮಾಡಿದ ಇಬ್ಬರು ಜಾನಪದ ತಜ್ಞರು; ಮತ್ತು

(vii) ಪರಿನಿಯಮಗಳ ಮೂಲಕ ಗೊತ್ತುಪಡಿಸಬಹುದಾದಂಥ ಇತರ ವ್ಯಕ್ತಿಗಳು.

(10) ವ್ಯಾಸಂಗ ವಿಭಾಗಗಳು ಪರಿನಿಯಮಗಳ ಮೂಲಕ ನಿಯಮಿಸಬಹುದಾದಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

**31. ಅಧ್ಯಯನಗಳ ಮಂಡಳಿಗಳು.**- (1) ಆರ್ಡಿನೆನ್ಸ್‌ಗಳ ಮೂಲಕ ನಿಯಮಿಸಬಹುದಾದಂತೆ ಪ್ರತಿಯೊಂದು ವಿಷಯಕ್ಕೆ ಅಥವಾ ವಿಷಯಗಳ ಸಮೂಹಕ್ಕೆ ಒಂದು ಅಧ್ಯಯನಗಳ ಮಂಡಳಿ ಇರತಕ್ಕದ್ದು.

(2) (1)ನೇ ಉಪಪ್ರಕರಣದ ಉಪಬಂಧಗಳಿಗೆ ಬಾಧಕವಾಗದಂತೆ, ಅಧ್ಯಯನಗಳ ಮಂಡಳಿಯ ರಚನೆ, ಪ್ರಕಾರ್ಯಗಳು ಮತ್ತು ಅಧಿಕಾರಗಳು ಪರಿನಿಯಮಗಳ ಮೂಲಕ ನಿಯಮಿಸಬಹುದಾದಂತೆ ಇರತಕ್ಕದ್ದು.

**32. ಅಧ್ಯಯನಾಂಗ, ಯೋಜನೆ, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ ಮಂಡಳಿ.–** (1) ಶೈಕ್ಷಣಿಕ ವ್ಯಾಸಂಗ ಕ್ರಮಗಳ, ಸಂಶೋಧನಾ ಕಾರ್ಯಕ್ರಮಗಳ, ಆಂತರಿಕ ಶಿಸ್ತು ಕಾರ್ಯ ಚಟುವಟಿಕೆಗಳ, ತರಬೇತಿ, ವಿಸ್ತರಣೆ ಮತ್ತು ಸಂಶೋಧನೆಗಾಗಿ ಬಾಹ್ಯ ಏಜೆನ್ಸಿಗಳೊಂದಿಗೆ ಸಂವಾದ ಚಟುವಟಿಕೆ ನಡೆಸುವುದಕ್ಕಾಗಿ ಮತ್ತು ಅದರಿಂದ ರೂಪಿಸಲಾದ ಕಾರ್ಯಕ್ರಮಗಳು ಮತ್ತು ಕಾರ್ಯಚಟುವಟಿಕೆಗಳನ್ನು ಕಾಲಕಾಲಕ್ಕೆ ಜಾರಿಗೊಳಿಸುವುದರ ಮೇಲ್ವಿಚಾರಣೆ ಮಾಡುವುದಕ್ಕಾಗಿ ಅಧ್ಯಯನಾಂಗ, ಯೋಜನೆ, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ ಮಂಡಳಿ ಇರತಕ್ಕದ್ದು.

(2) ಅಧ್ಯಯನಾಂಗ, ಯೋಜನೆ, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ ಮಂಡಳಿಯು ಈ ಮುಂದಿನ ಸದಸ್ಯರನ್ನು ಹೊಂದಿರತಕ್ಕದ್ದು, ಎಂದರೆ:–

(i) ಕುಲಪತಿಯವರು ಅಧ್ಯಕ್ಷರಾಗಿರತಕ್ಕದ್ದು;

(ii) ಕುಲಸಚಿವರು (ಮೌಲ್ಯಮಾಪನ);

(iii) ಸರದಿಯ ಮೇಲೆ, ಒಂದು ವರ್ಷದ ಅವಧಿಗೆ ಕುಲಪತಿಯವರ ಶಿಫಾರಸ್ಸಿನಂತೆ ವ್ಯಾಸಂಗ ವಿಭಾಗದ ಇಬ್ಬರು ಅತ್ಯಂತ ಹಿರಿಯ ಡೀನ್‌ಗಳು;

(iv) ಎರಡು ವರ್ಷಗಳ ಅವಧಿಗಾಗಿ, ಇಬ್ಬರು ಅತ್ಯಂತ ಹಿರಿಯ ಪ್ರಾಧ್ಯಾಪಕರು, ಅವರಲ್ಲಿ ಪರಂಪರೆ, ವಿಜ್ಞಾನ ಮತ್ತು ತಂತ್ರಜ್ಞಾನದಿಂದ ಒಬ್ಬರು ಮತ್ತು ಕುಲಪತಿಯವರಿಂದ ನಾಮನಿರ್ದೇಶಿತರಾದ ಪ್ರಾಧ್ಯಾಪಕರ ಪೈಕಿಯಿಂದ ಮತ್ತೊಬ್ಬರು;

(v) ಎರಡು ವರ್ಷಗಳ ಅವಧಿಗಾಗಿ ಸರ್ಕಾರದಿಂದ ನಾಮನಿರ್ದೇಶಿತರಾದ ಒಬ್ಬರು ಜಾನಪದ ತಜ್ಞರು ಅಥವಾ ಬೋಧನೆ ಮತ್ತು ಸಂಶೋಧನೆಯಲ್ಲಿ ಹಾಗೂ ಶೈಕ್ಷಣಿಕ ಆಡಳಿತದಲ್ಲಿ ಅಪಾರ ಅನುಭವ ಹೊಂದಿರುವ ಶಿಕ್ಷಣ ತಜ್ಞರು;

(vi) ಸರ್ಕಾರದಿಂದ ನಾಮನಿರ್ದೇಶಿತರಾದ ಯೋಜನಾ ಇಲಾಖೆಯ ಸರ್ಕಾರದ ಉಪಕಾರ್ಯದರ್ಶಿಯವರ ಅಥವಾ ಯೋಜನಾ ಜಂಟಿ ನಿರ್ದೇಶಕರ ದರ್ಜೆಗಿಂತ ಕಡಿಮೆಯದಲ್ಲದ ದರ್ಜೆಯ ಸರ್ಕಾರದ ಒಬ್ಬ ಅಧಿಕಾರಿ.

(3) ಅಧ್ಯಯನಾಂಗ, ಯೋಜನೆ, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ ಮಂಡಳಿಯು, ಕನಿಷ್ಠಪಕ್ಷ ಮೂರು ತಿಂಗಳಿಗೊಮ್ಮೆಯಾದರೂ ಸಭೆ ಸೇರತಕ್ಕದ್ದು. ಅಧ್ಯಯನಾಂಗ, ಯೋಜನೆ, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ ಮಂಡಳಿಯು ಪ್ರತಿಯೊಂದು ಠರಾವನ್ನು ಪರಿಗಣನೆಗಾಗಿ ಮತ್ತು ಅವುಗಳ ಬಗ್ಗೆ ಕ್ರಮ ಕೈಗೊಳ್ಳುವುದಕ್ಕಾಗಿ ಶೈಕ್ಷಣಿಕ ಪರಿಷತ್ತು ಮತ್ತು ಸಿಂಡಿಕೇಟಿನ ಮುಂದೆ ಇಡತಕ್ಕದ್ದು.

**33. ಪರೀಕ್ಷಕರ ನೇಮಕಾತಿ ಮಂಡಳಿ.–** (1) ಪ್ರತಿಯೊಂದು ವ್ಯಾಸಂಗ ವಿಭಾಗಕ್ಕೆ, ಪ್ರತಿವರ್ಷಕ್ಕಾಗಿ ಪರೀಕ್ಷಕರ ಪಟ್ಟಿಯನ್ನು ತಯಾರಿಸುವ ಉದ್ದೇಶಕ್ಕಾಗಿ, ಪರೀಕ್ಷಕರ ನೇಮಕಾತಿ ಮಂಡಳಿಯನ್ನು ರಚಿಸತಕ್ಕದ್ದು.

(2) ಅಂಥ ಪ್ರತಿಯೊಂದು ಪರೀಕ್ಷಕರ ನೇಮಕಾತಿ ಮಂಡಳಿಯು, ಈ ಮುಂದಿನ ಸದಸ್ಯರನ್ನು ಹೊಂದಿರತಕ್ಕದ್ದು, ಎಂದರೆ:–

(i) ಕುಲಪತಿಯವರು ಅಧ್ಯಕ್ಷರಾಗಿರತಕ್ಕದ್ದು;

(ii) ಕುಲಸಚಿವರು (ಮೌಲ್ಯಮಾಪನ);

(iii) ಸಂಬಂಧಪಟ್ಟ ವ್ಯಾಸಂಗ ವಿಭಾಗದ ಡೀನ್;

(iv) ನಿರ್ದಿಷ್ಟ ವಿಷಯದಲ್ಲಿನ ಅಧ್ಯಯನ ಮಂಡಳಿಯ ಅಧ್ಯಕ್ಷರು;

(v) ಕುಲಪತಿಯವರು ನಾಮನಿರ್ದೇಶನ ಮಾಡಿದ, ವ್ಯಾಸಂಗ ವಿಭಾಗದಲ್ಲಿನ ಸಂಬಂಧಪಟ್ಟ ಅಧ್ಯಯನ ವಿಭಾಗದಲ್ಲಿ ಬೋಧಿಸುವ ಇಬ್ಬರು ಅಧ್ಯಾಪಕರು; ಮತ್ತು

(vi) ಕುಲಪತಿಯವರು ನಾಮನಿರ್ದೇಶನ ಮಾಡಿದ ವ್ಯಾಸಂಗ ವಿಭಾಗದಲ್ಲಿನ ಸಂಬಂಧಪಟ್ಟ ಅಧ್ಯಯನ ವಿಭಾಗದಲ್ಲಿರುವ ಸ್ನಾತಕ ಪದವಿ ವಿಷಯಗಳನ್ನು ಬೋಧಿಸುವ ಇಬ್ಬರು ಅಧ್ಯಾಪಕರು.

(3) ಪರೀಕ್ಷಕರ ನೇಮಕಾತಿ ಮಂಡಳಿಯು, ಅಧ್ಯಯನ ಮಂಡಳಿಯು ತಯಾರಿಸಬೇಕಾದ ಪಟ್ಟಿಗಳಲ್ಲಿ ಒಳಗೊಂಡ ವ್ಯಕ್ತಿಗಳ ಪೈಕಿಯಿಂದ ಪರೀಕ್ಷಕರ ಪಟ್ಟಿಗಳನ್ನು ಸಿದ್ಧಪಡಿಸತಕ್ಕದ್ದು ಮತ್ತು ಅದನ್ನು ಸಿಂಡಿಕೇಟಿನ ಅನುಮೋದನೆಗೆ ಒಪ್ಪಿಸತಕ್ಕದ್ದು.

(4) ಯಾವ ಕಾರಣದ ಮೇಲೆ ಬದಲಾವಣೆಯನ್ನು ಸೂಚಿಸಲಾಗಿದೆಯೋ ಅಥವಾ ಮಾಡಲಾಗಿದೆಯೋ, ಆ ನಿರ್ದಿಷ್ಟ ಕಾರಣವನ್ನು ನಿರೂಪಿಸುವ ನಿರ್ಣಯವನ್ನು ಅಂಗೀಕರಿಸದ ಹೊರತು, ಸಿಂಡಿಕೇಟು ಆ ಪಟ್ಟಿಯಲ್ಲಿ ಯಾವುದೇ ಅಂಥ ಬದಲಾವಣೆಯನ್ನು ಸೂಚಿಸತಕ್ಕದ್ದಲ್ಲ ಅಥವಾ ಮಾಡತಕ್ಕದ್ದಲ್ಲ.

(5) ಸಿಂಡಿಕೇಟಿನಿಂದ ನೇಮಕಗೊಂಡ ಯಾವೊಬ್ಬ ಪರೀಕ್ಷಕರು, ಯಾವುದೇ ಕಾರಣಕ್ಕಾಗಿ, ಪರೀಕ್ಷಕರ ಕೆಲಸವನ್ನು ಅಂಗೀಕರಿಸಲು ಅಸಮರ್ಥರಾದಲ್ಲಿ ಮತ್ತು ಸಿಂಡಿಕೇಟು ಸಕಾಲದಲ್ಲಿ ಹೊಸ ನೇಮಕಾತಿಯನ್ನು ಮಾಡಲಾಗದಿದ್ದಲ್ಲಿ, ಕುಲಪತಿಯು ಬೇರೊಬ್ಬ ಪರೀಕ್ಷಕರನ್ನು ನೇಮಕ ಮಾಡತಕ್ಕದ್ದು ಮತ್ತು ಅಂಥ ನೇಮಕಾತಿಯನ್ನು ಸಿಂಡಿಕೇಟಿಗೆ ವರದಿ ಮಾಡತಕ್ಕದ್ದು.

(6) ಹಾಜರಿದ್ದ ಮೂರನೇ ಎರಡರಷ್ಟು ಸದಸ್ಯರು ಸಿಂಡಿಕೇಟಿನ ನಿರ್ಣಯವನ್ನು ಅಂಗೀಕರಿಸದ ಹೊರತು, ಮಂಡಳಿಯ ಯಾವೊಬ್ಬ ಸದಸ್ಯರನ್ನು ಪರೀಕ್ಷಕರನ್ನಾಗಿ ನೇಮಕ ಮಾಡತಕ್ಕದ್ದಲ್ಲ.

**34. ಇತರೆ ಮಂಡಳಿಗಳು.– (1)** ವಿಶ್ವವಿದ್ಯಾಲಯವು, ಕಾಲಕಾಲಕ್ಕೆ ಪರಿನಿಯಮಗಳ ಮೂಲಕ ನಿಯಮಿಸಬಹುದಾದ ಅಂಥ ಇತರ ಮಂಡಳಿಗಳನ್ನು ಸ್ಥಾಪಿಸಬಹುದು.

**(2)** (1)ನೇ ಉಪಪಕ್ರರಣದ ಅಡಿಯಲ್ಲಿ ಸ್ಥಾಪಿಸಲಾದ ಮಂಡಳಿಗಳ ರಚನೆ, ಪ್ರಕಾರ್ಯಗಳು, ಅಧಿಕಾರಗಳು ಮತ್ತು ಕರ್ತವ್ಯಗಳು ಪರಿನಿಯಮಗಳ ಮೂಲಕ ನಿಯಮಿಸಲಾದಂತೆ ಇರತಕ್ಕದ್ದು.

**35. ಶೈಕ್ಷಣಿಕ ಪರಿಷತ್ತು ಮತ್ತು ಸಿಂಡಿಕೇಟಿನ ಸದಸ್ಯರ ಪದಾವಧಿ.–** (1) ಅನ್ಯಥಾ ಉಪಬಂಧಿಸಿದ್ದನ್ನುಳಿದು, ಶೈಕ್ಷಣಿಕ ಪರಿಷತ್ತಿನ ಮತ್ತು ಸಿಂಡಿಕೇಟಿನ ಪದನಿಮಿತ್ತ ಸದಸ್ಯರನ್ನು ಹೊರತುಪಡಿಸಿ, ಉಳಿದ ಸದಸ್ಯರ ಪದಾವಧಿಯು, ಮೂರು ವರ್ಷಗಳು ಆಗಿರತಕ್ಕದ್ದು.

(2) ಈ ಅಧ್ಯಾದೇಶದಲ್ಲಿ ಏನೇ ಒಳಗೊಂಡಿದ್ದರೂ, ಶೈಕ್ಷಣಿಕ ಪರಿಷತ್ತು ಮತ್ತು ಸಿಂಡಿಕೇಟು ಮೂರು ವರ್ಷಕ್ಕೊಮ್ಮೆ ಏಕಕಾಲದಲ್ಲಿ ಪುನಾರಚನೆಯಾಗತಕ್ಕದ್ದು.

**36. ಪ್ರಾಧಿಕಾರಗಳ ಸದಸ್ಯತ್ವವನ್ನು ಹೊಂದಲು ನಿರ್ಬಂಧ.–** (1) ಈ ಅಧ್ಯಾದೇಶದ ಅಡಿಯಲ್ಲಿ ಯಾವುದೇ ಪ್ರಾಧಿಕಾರಕ್ಕೆ ನಾಮನಿರ್ದೇಶಿತರಾದ ಯಾವೊಬ್ಬ ಸದಸ್ಯರು, ಸಂಬಂಧಪಟ್ಟ ನಾಮನಿರ್ದೇಶನ ಪ್ರಾಧಿಕಾರದ ಇಷ್ಟಪರ್ಯಂತ ಪದಧಾರಣ ಮಾಡತಕ್ಕದ್ದು.

(2) ಈ ಅಧ್ಯಾದೇಶದ ಅಡಿಯಲ್ಲಿ ಯಾವುದೇ ಪ್ರಾಧಿಕಾರಕ್ಕೆ ನಾಮನಿರ್ದೇಶಿತರಾದ ಯಾವೊಬ್ಬ ವ್ಯಕ್ತಿಯು, ಎರಡನೇ ಅವಧಿಗಾಗಿ ನಾಮನಿರ್ದೇಶಿತರಾಗಲು ಅರ್ಹರಾಗಿರತಕ್ಕದ್ದಲ್ಲ.

(3) ಯಾವುದೇ ಪ್ರಾಧಿಕಾರಕ್ಕೆ ನಾಮನಿರ್ದೇಶನಗೊಂಡ ಯಾವೊಬ್ಬ ವ್ಯಕ್ತಿಯನ್ನು, ಅವರ ದುರ್ವರ್ತನೆ, ದುರ್ನಡತೆಯ ಆಧಾರದ ಮೇಲೆ ಅಥವಾ ಅನ್ಯಥಾ ಆ ಬಗ್ಗೆ ವಿಚಾರಣೆ ನಡೆಸಿದ ತರುವಾಯ, ಕುಲಾಧಿಪತಿಯು, ಯಾವುದೇ ಸಮಯದಲ್ಲಿ ಅಂಥ ಸದಸ್ಯತ್ವದಿಂದ ಅವರನ್ನು ತೆಗೆದುಹಾಕತಕ್ಕದ್ದು:

(4) ಈ ಅಧ್ಯಾದೇಶದಲ್ಲಿ ಒಳಗೊಂಡಿರುವುದಾವುದೂ, ಅನ್ಯಥಾ ಉಪಬಂಧಿಸಿದ ಹೊರತು, ವಿಶ್ವವಿದ್ಯಾಲಯದ ಯಾವೊಬ್ಬ ನೌಕರನು, ಬೋಧನೆ ಮತ್ತು ಬೋಧಕೇತರ ಎರಡರಲ್ಲೂ ಅಥವಾ ಆಡಳಿತ ಸಿಬ್ಬಂದಿ ಅಥವಾ ಸಂಸ್ಥೆಯ ವ್ಯವಸ್ಥಾಪನೆಯಲ್ಲಿರುವ ಯಾವೊಬ್ಬ ವ್ಯಕ್ತಿಯು, ಅವನು ಯಾವುದೇ ಸಾಮರ್ಥ್ಯ ಹೊಂದಿರಲಿ ಅವನು ಈ ಅಧ್ಯಾದೇಶದ ಅಡಿಯಲ್ಲಿ ಯಾವುದೇ ಪ್ರಾಧಿಕಾರದ ಸದಸ್ಯನೆಂಬುದಾಗಿ ನಾಮನಿರ್ದೇಶಿತನಾಗಲು ಅರ್ಹನಾಗಿರತಕ್ಕದ್ದಲ್ಲ.

**37. ಸದಸ್ಯತ್ವಕ್ಕೆ ಅನರ್ಹತೆ.–** (1) ಯಾವೊಬ್ಬ ವ್ಯಕ್ತಿಯು ಅಂಥ ಚುನಾವಣೆ ಅಥವಾ ನಾಮ ನಿರ್ದೇಶನದ ದಿನಾಂಕದಂದು,

(ಎ) ಅಸ್ವಸ್ಥಚಿತ್ತದವನಾಗಿದ್ದರೆ,

(ಬಿ) ದಿವಾಳಿಯೆಂದು ಅಥವಾ ಅನುನ್ಮುಕ್ತ ದಿವಾಳಿಯೆಂದು ನಿರ್ಣೀತನಾಗಿದ್ದರೆ, ಅಥವಾ

(ಸಿ) ನೈತಿಕ ಅಧ:ಪತನವನ್ನು ಒಳಗೊಂಡಿರುವ ಯಾವುದೇ ಅಪರಾಧಕ್ಕಾಗಿ ಕ್ರಿಮಿನಲ್ ನ್ಯಾಯಾಲಯದಿಂದ ಕಾರಾವಾಸದ ಶಿಕ್ಷೆಗೆ ಗುರಿಯಾಗಿದ್ದರೆ,

–ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರಗಳ ಸದಸ್ಯರೆಂದು ಚುನಾಯಿತರಾಗಲು ಅಥವಾ ನಾಮನಿರ್ದೇಶಿತರಾಗಲು ಅನರ್ಹರಾಗಿರತಕ್ಕದ್ದು.

(2) ಒಬ್ಬ ವ್ಯಕ್ತಿಯು (1) ನೇ ಉಪಪ್ರಕರಣದ ಅಡಿಯಲ್ಲಿ ಅನರ್ಹನೇ ಇಲ್ಲವೇ ಎಂಬ ಬಗ್ಗೆ ಯಾವುದೇ ವಿವಾದ ಅಥವಾ ಸಂದೇಹ ಉಂಟಾದ ಸಂದರ್ಭದಲ್ಲಿ, ಅದನ್ನು ಸಿಂಡಿಕೇಟ್ ತೀರ್ಮಾನಿಸತಕ್ಕದ್ದು ಮತ್ತು ಅದರ ತೀರ್ಮಾನವು ಅಂತಿಮವಾಗಿರತಕ್ಕದ್ದು.

**38. ಕೆಲವು ಸಂದರ್ಭಗಳಲ್ಲಿ ಶೈಕ್ಷಣಿಕ ಪರಿಷತ್ತು ಮತ್ತು ಸಿಂಡಿಕೇಟ್‌ಗೆ ನಾಮ ನಿರ್ದೇಶಿತನಾಗಲು ಅನರ್ಹತೆ.–** (1) 27ನೇ ಅಥವಾ 24ನೇ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಈ ಮುಂದಿನ ಯಾವುದೇ ಒಂದು ಅಥವಾ ಎರಡು ಪ್ರಾಧಿಕಾರಗಳು, ಎಂದರೆ:–

(ಎ) ಶೈಕ್ಷಣಿಕ ಪರಿಷತ್ತು; ಮತ್ತು

(ಬಿ) ಸಿಂಡಿಕೇಟ್,

–ಇವುಗಳಲ್ಲಿ ಒಟ್ಟು ಆರು ವರ್ಷಗಳ ಅವಧಿಯವರೆಗೆ ಸದಸ್ಯರಾಗಿ ಧಾರಣೆ ಮಾಡಿದ ಯಾವೊಬ್ಬ ವ್ಯಕ್ತಿಯು ಸದರಿ ಎರಡೂ ಪ್ರಾಧಿಕಾರಗಳಲ್ಲಿ ಯಾವುದಕ್ಕೇ ಆಗಲಿ ನಾಮನಿರ್ದೇಶಿತರಾಗಲು ಅರ್ಹರಾಗತಕ್ಕದ್ದಲ್ಲ:

ಪರಂತು, ಅಂಥ ಯಾವುದೇ ಆದೇಶವನ್ನು ಮಾಡುವುದಕ್ಕೆ ಮೊದಲು ಸರ್ಕಾರವು ವಿಶ್ವವಿದ್ಯಾಲಯಕ್ಕೆ ಒಂದು ಅವಕಾಶವನ್ನು ಕೊಡತಕ್ಕದ್ದು:

**ವಿವರಣೆ.–** ಈ ಉಪ ಪ್ರಕರಣದಲ್ಲಿ ಉಲ್ಲೇಖಿಸಲಾದ ಆರು ವರ್ಷಗಳ ಒಟ್ಟು ಅವಧಿಯನ್ನು ಲೆಕ್ಕ ಹಾಕುವ ಉದ್ದೇಶಕ್ಕಾಗಿ, ಒಂದು ಪ್ರಾಧಿಕಾರದಲ್ಲಿ ಒಬ್ಬ ವ್ಯಕ್ತಿಯು ನಾಮ ನಿರ್ದೇಶನದ ಮೂಲಕ ಪದಧಾರಣ ಮಾಡಿದ್ದ ಮೂರು ವರ್ಷಗಳ ಅವಧಿ ಮತ್ತು ಇನ್ನೊಂದು ಪ್ರಾಧಿಕಾರದಲ್ಲಿ ಅವರು ನಾಮ ನಿರ್ದೇಶನದ ಮೂಲಕ ಪದಧಾರಣ ಮಾಡಿದ್ದ ಮೂರು ವರ್ಷಗಳ ಅವಧಿಯನ್ನು ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು ಮತ್ತು ತದನುಸಾರವಾಗಿ ಅಂಥ ವ್ಯಕ್ತಿಯು ಸದರಿ ಎರಡು ಪ್ರಾಧಿಕಾರಗಳಲ್ಲಿ ಯಾವುದೇ ಒಂದಕ್ಕೆ ನಾಮ ನಿರ್ದೇಶಿತರಾಗಲು ಅರ್ಹರಾಗಿರತಕ್ಕದ್ದಲ್ಲ:

ಮತ್ತು ಪರಂತು, ಈ ಉಪ ಪ್ರಕರಣದ ಉದ್ದೇಶಗಳಿಗಾಗಿ, ಆಕಸ್ಮಿಕ ಖಾಲಿ ಸ್ಥಾನದಲ್ಲಿರುವ ಸದರಿ ಎರಡೂ ಪ್ರಾಧಿಕಾರಗಳ ಪೈಕಿ ಯಾವುದೇ ಒಂದರಲ್ಲಿ ಪದಧಾರಣ ಮಾಡಿದ ಒಬ್ಬ ವ್ಯಕ್ತಿಯು, ಆ ಪ್ರಾಧಿಕಾರದಲ್ಲಿ ಮೂರು ವರ್ಷಗಳ ಅವಧಿಯವರೆಗೆ ಪದಧಾರಣ ಮಾಡಿದ್ದರೆಂದು ಭಾವಿಸತಕ್ಕದ್ದು:

ಅಲ್ಲದೆ ಪರಂತು, ಈ ಉಪಪ್ರಕರಣದ ಉದ್ದೇಶಗಳಿಗಾಗಿ ಒಬ್ಬ ವ್ಯಕ್ತಿಯು ಒಂದು ಪ್ರಾಧಿಕಾರಕ್ಕೆ ನಾಮನಿರ್ದೇಶಿತರಾಗಿದ್ದು, ಅಂಥ ವ್ಯಕ್ತಿಯು ಮೊದಲು ನಮೂದಿಸಲಾದ ಪ್ರಾಧಿಕಾರದಲ್ಲಿನ ಸದಸ್ಯತ್ವದ ಆಧಾರದ ಮೇಲೆ ಇನ್ನೊಂದು ಪ್ರಾಧಿಕಾರದ ಸದಸ್ಯನಾದರೆ, ಮೊದಲು ನಮೂದಿಸಲಾದ ಪ್ರಾಧಿಕಾರದಲ್ಲಿ ಪದಧಾರಣ ಮಾಡಿದ್ದ ಅವಧಿಯೊಂದನ್ನೇ ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು.

(2) (1)ನೇ ಉಪ ಪ್ರಕರಣದಲ್ಲಿರುವುದಾವುದೂ,

(ಎ) ಸಿಂಡಿಕೇಟ್ ಸದಸ್ಯರಲ್ಲದ ಶೈಕ್ಷಣಿಕ ಪರಿಷತ್ತಿನ ಸದಸ್ಯರನ್ನು ಒಳಗೊಂಡಿಲ್ಲದ 27ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ಸದಸ್ಯರ; ಮತ್ತು

(ಬಿ) ಪದನಿಮಿತ್ತ ಸದಸ್ಯರಂತೆ ಉಲ್ಲೇಖಿಸಿದ ಸದಸ್ಯರ,

–ಸಂಬಂಧದಲ್ಲಿ ಅನ್ವಯಿಸತಕ್ಕದ್ದಲ್ಲ.

## ಅಧ್ಯಾಯ – V

### ಪರಿನಿಯಮಗಳು, ಆರ್ಡಿನೆನ್ಸ್‌ಗಳು, ವಿನಿಯಮಗಳು ಮತ್ತು ನಿಯಮಗಳು

**39. ಪರಿನಿಯಮಗಳು.–** (1) ಈ ಅಧ್ಯಾದೇಶದ ಉಪಬಂಧಗಳಿಗೊಳಪಟ್ಟು ಪರಿನಿಯಮಗಳು ಈ ಮುಂದಿನ ಎಲ್ಲ ಅಥವಾ ಯಾವುದೇ ವಿಷಯಗಳಿಗೆ ಉಪಬಂಧ ಕಲ್ಪಿಸಬಹುದು, ಎಂದರೆ:–

(i) ವಿಶ್ವವಿದ್ಯಾಲಯದ ಪ್ರಾಧಿಕಾರಗಳ ಮತ್ತು ವಿಶ್ವವಿದ್ಯಾಲಯದ ಪ್ರಾಧಿಕಾರಗಳೆಂದು ಕಾಲಕಾಲಕ್ಕೆ ಘೋಷಿಸಬಹುದಾದಂಥ ಇತರ ನಿಕಾಯಗಳ ರಚನೆ, ಪ್ರಕಾರ್ಯಗಳು ಮತ್ತು ಅಧಿಕಾರಗಳು;

(ii) ಮೊದಲಿನ ಸದಸ್ಯರು ಪದದಲ್ಲಿ ಮುಂದುವರಿಯುವುದು ಒಳಗೊಂಡಂತೆ ಸದರಿ ಪ್ರಾಧಿಕಾರಗಳ ಅಥವಾ ನಿಕಾಯಗಳ ಸದಸ್ಯರ ನೇಮಕ ಮತ್ತು ಅವರು ಪದದಲ್ಲಿ ಮುಂದುವರೆಯುವುದು ಮತ್ತು ಸದಸ್ಯರ ಖಾಲಿ ಸ್ಥಾನಗಳನ್ನು ತುಂಬುವುದು ಮತ್ತು ಪ್ರಾಧಿಕಾರಗಳಿಗೆ ಅಥವಾ ನಿಕಾಯಗಳಿಗೆ ಸಂಬಂಧಪಟ್ಟಂತೆ ಯಾವ ವಿಷಯಗಳಿಗೆ ಉಪಬಂಧ ಕಲ್ಪಿಸುವುದು ಅವಶ್ಯವಾಗಬಹುದೋ ಅಥವಾ ಅಪೇಕ್ಷಣೀಯವಾಗಬಹುದೋ ಆ ಎಲ್ಲ ಇತರ ವಿಷಯಗಳ ಬಗ್ಗೆ ಉಪಬಂಧ ಕಲ್ಪಿಸುವುದು;

(iii) ಗೌರವ ಪದವಿಗಳನ್ನು ಪ್ರದಾನ ಮಾಡುವುದು;

(iv) ಪದವಿ ಮತ್ತು ಡಿಪ್ಲೊಮಾಗಳನ್ನು ಪ್ರದಾನ ಮಾಡಲು ಘಟಿಕೋತ್ಸವಗಳನ್ನು ನಡೆಸುವುದು ಮತ್ತು ತುರ್ತು ಸಂದರ್ಭದಲ್ಲಿ ಘಟಿಕೋತ್ಸವಕ್ಕೆ ಮೊದಲು ಪದವಿ ಪ್ರಮಾಣ ಪತ್ರಗಳನ್ನು ನೀಡುವುದು;

(v) ಪದವಿಗಳ, ಡಿಪ್ಲೊಮಾಗಳ, ಸರ್ಟಿಫಿಕೇಟ್‌ಗಳ ಹಾಗೂ ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಹಿಂತೆಗೆದುಕೊಳ್ಳುವುದು;

(vi) ವ್ಯಾಸಂಗ ವಿಭಾಗಗಳು, ವಿದ್ಯಾರ್ಥಿನಿಲಯಗಳು ಮತ್ತು ಸಂಸ್ಥೆಗಳ ಸ್ಥಾಪನೆ, ನಿರ್ವಹಣೆ ಮತ್ತು ಅವುಗಳನ್ನು ರದ್ದುಪಡಿಸುವುದು;

(vii) ಸಂಸ್ಥೆಗಳನ್ನು ಮಾನ್ಯ ಮಾಡುವ ಮತ್ತು ಅಂಥ ಮಾನ್ಯತೆಯನ್ನು ಹಿಂತೆಗೆದುಕೊಳ್ಳಬಹುದಾದ ಬಗೆಗಿನ ಷರತ್ತುಗಳು;

(viii) ಸಂಶೋಧನಾ ವೇತನಗಳು, ವಿದ್ಯಾರ್ಥಿ ವೇತನಗಳು, ಶಿಷ್ಯ ವೇತನಗಳು, ಪ್ರವೇತನಗಳು, ಪದಕಗಳು ಮತ್ತು ಪಾರಿತೋಷಕಗಳ ಸ್ಥಾಪನೆ;

(ix) ಪ್ರಾಧ್ಯಾಪಕರ, ಸಹ ಪ್ರಾಧ್ಯಾಪಕರ, ಸಹಾಯಕ ಪ್ರಾಧ್ಯಾಪಕರ, ಆಡಳಿತ ಸಿಬ್ಬಂದಿ ಹುದ್ದೆಗಳ ಸ್ಥಾಪನೆ, ಅಮಾನತ್ತು ಅಥವಾ ರದ್ದುಪಡಿಸುವುದು;

(x) ಹುದ್ದೆಗಳ ಸೃಜನೆ;

(xi) ವಿಶ್ವವಿದ್ಯಾಲಯಗಳಲ್ಲಿ ಮತ್ತು ಮಾನ್ಯತೆ ಪಡೆದ ಸಂಸ್ಥೆಗಳಲ್ಲಿ ಅಧ್ಯಾಪಕರ ನೇಮಕಾತಿಯ ವಿಧಾನ:

ಪರಂತು, ವಿಶ್ವವಿದ್ಯಾಲಯ ಅನುದಾನ ಆಯೋಗದ ವೇತನ ಶ್ರೇಣಿ ಪಡೆಯುತ್ತಿರುವವರನ್ನು ಹೊರತುಪಡಿಸಿ, ನೌಕರರ ವೇತನ ಶ್ರೇಣಿಗಳು, ಸರ್ಕಾರಿ ನೌಕರರಿಗೆ ಅನ್ವಯವಾಗುವ ವೇತನ ಶ್ರೇಣಿಗಳಿಗೆ ಅನುಗುಣವಾಗಿರತಕ್ಕದ್ದು.

(xii) ಉಯಿಲಿನ ಮೂಲಕ ಬರುವ ಸ್ವತ್ತಿನ, ದೇಣಿಗೆಗಳ ಮತ್ತು ದತ್ತಿಗಳ ಸ್ವೀಕಾರ ಮತ್ತು ನಿರ್ವಹಣೆ;

(xiii) ವಿಶ್ವವಿದ್ಯಾಲಯದಲ್ಲಿ ಮತ್ತು ಮಾನ್ಯತೆ ಪಡೆದ ಸಂಸ್ಥೆಗಳಲ್ಲಿ ವ್ಯಾಸಂಗ ಕ್ರಮಗಳಿಗೆ ಮತ್ತು ವಿಶ್ವವಿದ್ಯಾಲಯದ ಪರೀಕ್ಷೆಗಳು, ಪದವಿಗಳು ಮತ್ತು ಡಿಪ್ಲೊಮಾಗಳ ಪ್ರವೇಶಗಳಿಗಾಗಿ ವಿಧಿಸಬೇಕಾದ ಫೀಜುಗಳು;

(xiv) ವಿಶ್ವವಿದ್ಯಾಲಯವು ಸಲ್ಲಿಸಿದ ಸೇವೆಗಳಿಗಾಗಿ ವಿಧಿಸಬೇಕಾದ ಫೀಜುಗಳು;

(xv) ಉಪಲಬ್ಧಿಗಳನ್ನು ಒಳಗೊಂಡಂತೆ ನೌಕರರ ಸೇವಾ ಷರತ್ತುಗಳು; ಮತ್ತು

(xvi) ಈ ಅಧ್ಯಾದೇಶದ ಮೂಲಕ ಅಥವಾ ಪರಿನಿಯಮಗಳ ಮೂಲಕ ಉಪಬಂಧಿಸಬೇಕಾದ ಅಥವಾ ಉಪಬಂಧಿಸಬಹುದಾದ ಎಲ್ಲ ಇತರ ವಿಷಯಗಳು.

(2) ಪರಿನಿಯಮಗಳು, ಕುಲಾಧಿಪತಿಯವರ ಅನುಮೋದನೆಯ ದಿನಾಂಕದಿಂದ ಅಥವಾ ಕುಲಾಧಿಪತಿಯವರು ನಿರ್ದೇಶಿಸಬಹುದಾದ ಅಂಥ ಇತರ ದಿನಾಂಕದಿಂದ ಮಾತ್ರ ಜಾರಿಗೆ ಬರತಕ್ಕದ್ದು.

(3) ಉಪಲಬ್ಧಿಗಳು ಒಳಗೊಂಡಂತೆ ನೌಕರರ ಸೇವಾ ಷರತ್ತುಗಳನ್ನು ನಿಯಂತ್ರಿಸುವ ಪರಿನಿಯಮಗಳು ಸರ್ಕಾರದ ಕಾರ್ಯನೀತಿಗೆ ಸುಸಂಗತವಾಗಿರತಕ್ಕದ್ದು.

**40. ಪರಿನಿಯಮಗಳ ಅಧಿನಿಯಮಿತಿ ಮತ್ತು ಅವುಗಳ ರಚನೆ.–** (1) ಸಿಂಡಿಕೇಟ್, ಇದರಲ್ಲಿ ಇನ್ನು ಮುಂದೆ ಉಪಬಂಧಿಸಿದ ರೀತಿಯಲ್ಲಿ ಪರಿನಿಯಮಗಳನ್ನು ರಚಿಸತಕ್ಕದ್ದು, ತಿದ್ದುಪಡಿ ಮಾಡತಕ್ಕದ್ದು ಅಥವಾ ನಿರಸನಗೊಳಿಸತಕ್ಕದ್ದು.

(2) ಸಿಂಡಿಕೇಟ್ ತಾನಾಗಿಯೇ ಆಗಲಿ ಅಥವಾ ಶೈಕ್ಷಣಿಕ ಪರಿಷತ್ತು ಮಾಡಿದ ಪ್ರಸ್ತಾವನೆಯ ಮೇಲಾಗಲಿ ಪರಿನಿಯಮದ ಕರಡನ್ನು ಪರಿಗಣನೆಗೆ ತೆಗೆದುಕೊಳ್ಳಬಹುದು. ಶೈಕ್ಷಣಿಕ ಪರಿಷತ್ತು ಕರಡನ್ನು ಪ್ರಸ್ತಾವಿಸದೇ ಇದ್ದಲ್ಲಿ, ಸಿಂಡಿಕೇಟ್ ಅದನ್ನು ಪರಿಗಣಿಸುವುದಕ್ಕೆ ಮೊದಲು ಶೈಕ್ಷಣಿಕ ಪರಿಷತ್ತಿನ ಅಭಿಪ್ರಾಯವನ್ನು ಪಡೆಯತಕ್ಕದ್ದು.

(3) ಸಿಂಡಿಕೇಟು, ಹಣಕಾಸಿನ ವಿಷಯಗಳು ಒಳಗೊಂಡಿದ್ದ ಪರಿನಿಯಮಗಳ ಸಂಬಂಧದಲ್ಲಿ ಹಣಕಾಸು ಸಮಿತಿಯ ಅಭಿಪ್ರಾಯವನ್ನು ಪಡೆಯತಕ್ಕದ್ದು.

(4) ಸಿಂಡಿಕೇಟು, ತಾನು ಅವಶ್ಯವೆಂದು ಭಾವಿಸಿದರೆ, ಕರಡು ಪರಿನಿಯಮಗಳ ಸಂಬಂಧದಲ್ಲಿ ಸಿಂಡಿಕೇಟ್ ಅವುಗಳನ್ನು ಪರಿಗಣಿಸುವುದಕ್ಕೆ ಮೊದಲು ವಿಶ್ವವಿದ್ಯಾಲಯದ ಯಾವೊಬ್ಬ ಅಧಿಕಾರಿಯ, ಪ್ರಾಧಿಕಾರದ ಅಥವಾ ನಿಕಾಯದ ಅಭಿಪ್ರಾಯವನ್ನು ಸಹ ಪಡೆಯಬಹುದು.

(5) ಸಿಂಡಿಕೇಟ್ ಅಂಗೀಕರಿಸಿದ ಪ್ರತಿಯೊಂದು ಪರಿನಿಯಮವನ್ನು, ತನ್ನ ನಿರ್ದಿಷ್ಟ ಶಿಫಾರಸ್ಸುಗಳೊಡನೆ ಅನುಮೋದನೆಗಾಗಿ ಕುಲಾಧಿಪತಿಯವರಿಗೆ ಒಪ್ಪಿಸುವುದಕ್ಕಾಗಿ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(6) ಸರ್ಕಾರವು, ಕರಡು ಪರಿನಿಯಮಗಳನ್ನು ಸ್ವೀಕರಿಸಿದ ದಿನಾಂಕದಿಂದ ಎರಡು ತಿಂಗಳುಗಳೊಳಗೆ ಅಂಥ ಕರಡು ಪರಿನಿಯಮಗಳನ್ನು ತನ್ನ ಟೀಕೆ ಟಿಪ್ಪಣಿಗಳು ಮತ್ತು ನಿರ್ದಿಷ್ಟ ಶಿಫಾರಸ್ಸುಗಳೊಡನೆ, ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು ಮತ್ತು ಕುಲಾಧಿಪತಿಯವರು, ಸರ್ಕಾರದಿಂದ ಕರಡು ಪರಿನಿಯಮಗಳನ್ನು ಸ್ವೀಕರಿಸಿದ ದಿನಾಂಕದಿಂದ ಒಂದು ತಿಂಗಳೊಳಗೆ ತನ್ನ ಅನುಮೋದನೆಯನ್ನು ನೀಡಬಹುದು ಅಥವಾ ತನ್ನ ಅನುಮೋದನೆಯನ್ನು ತಡೆಹಿಡಿಯಬಹುದು ಅಥವಾ ಅದನ್ನು ಮತ್ತಷ್ಟು ಪರಿಗಣನೆಗಾಗಿ ಸಿಂಡಿಕೇಟಿಗೆ ಕಳುಹಿಸಬಹುದು.

(7) ಸಿಂಡಿಕೇಟ್ ಅಂಗೀಕರಿಸಿದ ಪರಿನಿಯಮಗಳನ್ನು ಕುಲಾಧಿಪತಿಯವರ ಅನುಮೋದನೆಯ ಹೊರತು ಜಾರಿಗೊಳಿಸತಕ್ಕದ್ದಲ್ಲ.

**41. ಆರ್ಡಿನೆನ್ಸ್‌ಗಳು.–** (1) ಈ ಅಧ್ಯಾದೇಶದ ಮತ್ತು ಪರಿನಿಯಮಗಳ ಉಪಬಂಧಗಳಿಗೊಳಪಟ್ಟು, ಆರ್ಡಿನೆನ್ಸ್‌ಗಳು ಈ ಮುಂದಿನ ಎಲ್ಲ ಅಥವಾ ಯಾವುವೇ ವಿಷಯಗಳ ಬಗ್ಗೆ ಉಪಬಂಧ ಕಲ್ಪಿಸಬಹುದು, ಎಂದರೆ:–

(i) ವಿಶ್ವವಿದ್ಯಾಲಯಕ್ಕೆ ವಿದ್ಯಾರ್ಥಿಗಳ ಪ್ರವೇಶ ಮತ್ತು ಅವರನ್ನು ಹಾಗೆ ವಿದ್ಯಾರ್ಥಿಗಳ ಪಟ್ಟಿಗೆ ಸೇರಿಸುವುದು;

(ii) ವಿಶ್ವವಿದ್ಯಾಲಯದ ಎಲ್ಲ ಪದವಿಗಳ, ಸ್ನಾತಕೋತ್ತರ ಡಿಪ್ಲೊಮಾಗಳ ಮತ್ತು ಪ್ರಮಾಣ ಪತ್ರಗಳ ಬಗ್ಗೆ ವ್ಯಾಸಂಗ ಕ್ರಮಗಳು;

(iii) ಪದವಿಗಳು, ಡಿಪ್ಲೊಮಾಗಳು ಮತ್ತು ಪ್ರಮಾಣ ಪತ್ರಗಳು ಮತ್ತು ಅವುಗಳಿಗಾಗಿ ಇತರ ಅಗತ್ಯತೆಗಳು ಮತ್ತು ಅವುಗಳನ್ನು ನೀಡುವುದಕ್ಕೆ ಮತ್ತು ಪಡೆಯುವುದಕ್ಕೆ ಸಂಬಂಧಿಸಿದಂತೆ ಕೈಗೊಳ್ಳಬೇಕಾದ ಕ್ರಮಗಳು;

(iv) ಸಂಶೋಧನಾ ವೇತನಗಳು, ವಿದ್ಯಾರ್ಥಿ ವೇತನಗಳು, ಶಿಷ್ಯ ವೇತನಗಳು, ಪ್ರವೇತನಗಳು, ಪದಕಗಳು ಮತ್ತು ಪಾರಿತೋಷಕಗಳನ್ನು ನೀಡುವುದಕ್ಕೆ ಸಂಬಂಧಿಸಿದ ಷರತ್ತುಗಳು;

(v) ಪರೀಕ್ಷಾ ನಿಕಾಯಗಳು, ಪರೀಕ್ಷಕರು ಮತ್ತು ಮಾಡರೇಟರುಗಳ ಪದಾವಧಿ ಹಾಗೂ ಕರ್ತವ್ಯಗಳು ಸೇರಿದಂತೆ, ಪರೀಕ್ಷೆಗಳನ್ನು ನಡೆಸುವುದು;

(vi) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ನಿವಾಸದ ಬಗ್ಗೆ ಷರತ್ತುಗಳು;

(vii) ವಿದ್ಯಾರ್ಥಿನಿಯರ ನಿವಾಸ, ಶಿಸ್ತು ಮತ್ತು ಬೋಧನೆಗೆ ಸಂಬಂಧಿಸಿದಂತೆ ಮಾಡಬಹುದಾದ ವಿಶೇಷ ವ್ಯವಸ್ಥೆಗಳು ಏನಾದರೂ ಇದ್ದರೆ ಅವುಗಳನ್ನು ಮತ್ತು ಅವಶ್ಯವಿರುವಲ್ಲಿ ಅವರಿಗಾಗಿ ವಿಶೇಷ ವ್ಯಾಸಂಗ ಕ್ರಮಗಳನ್ನು ನಿಯಮಿಸುವುದು;

(viii) ಧಾರ್ಮಿಕ ಶಿಕ್ಷಣ ನೀಡುವುದನ್ನು ನಿಯಂತ್ರಿಸುವುದು;

(ix) ವಿಶ್ವವಿದ್ಯಾಲಯವು ಸ್ಥಾಪಿಸಿದ ಅಥವಾ ನಿರ್ವಹಿಸುತ್ತಿರುವ ಅಧ್ಯಯನ ಕೇಂದ್ರಗಳು ಮತ್ತು ಇತರ ಸಂಸ್ಥೆಗಳ ವ್ಯವಸ್ಥಾಪನೆ;

(x) ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದ ಸಂಸ್ಥೆಗಳ ಮತ್ತು ಇತರ ಸಂಸ್ಥೆಗಳ ಮೇಲ್ವಿಚಾರಣೆ ಮತ್ತು ಪರಿವೀಕ್ಷಣೆ;

(xi) ವಿಶ್ವವಿದ್ಯಾಲಯವು ನಿರ್ವಹಿಸದೆ ಇರುವ ವಿದ್ಯಾರ್ಥಿನಿಲಯಗಳ ಮನ್ನಣೆಗಾಗಿ ಷರತ್ತುಗಳು;

(xii) ವಿಶ್ವವಿದ್ಯಾಲಯದಲ್ಲಿ ಮತ್ತು ಮಾನ್ಯತೆ ಪಡೆದ ಸಂಸ್ಥೆಗಳಲ್ಲಿ ಹಾಗೂ ಇತರ ಸಂಸ್ಥೆಗಳಲ್ಲಿ ಇರುವ ವಿದ್ಯಾರ್ಥಿಗಳ ಆರೋಗ್ಯ ಮತ್ತು ಶಿಸ್ತು ಹಾಗೂ ಅವರ ವಿರುದ್ಧ ಶಿಸ್ತು ವ್ಯವಹರಣೆಗಳು;

(xiii) ವಿದ್ಯಾರ್ಥಿಗಳ ವರ್ಗಾವಣೆಗೆ ಸಂಬಂಧಿಸಿದಂತೆ ಸಂಸ್ಥೆಗಳ ಮತ್ತು ಮಾನ್ಯತೆ ಪಡೆದ ಸಂಸ್ಥೆಗಳು ಅನುಸರಿಸಬೇಕಾದ ಮತ್ತು ಜಾರಿಗೊಳಿಸಬೇಕಾದ ನಿಯಮಗಳು; ಮತ್ತು

(xiv) ಈ ಅಧ್ಯಾದೇಶದ ಅಥವಾ ಪರಿನಿಯಮಗಳ ಮೂಲಕ, ಆರ್ಡಿನೆನ್ಸ್‌ಗಳಿಂದ ಉಪಬಂಧ ಕಲ್ಪಿಸಬೇಕಾದ ಅಥವಾ ಉಪಬಂಧ ಕಲ್ಪಿಸಬಹುದಾದ ಇತರ ಎಲ್ಲ ವಿಷಯಗಳು.

(2) ಜಾರಿಯಲ್ಲಿರುವ ವಿನಿಯಮಗಳ ಅಥವಾ ಪರಿನಿಯಮಗಳ ತಿದ್ದುಪಡಿಗಾಗಿ ಯಾವುದೇ ಆರ್ಡಿನೆನ್ಸನ್ನು ರಚಿಸತಕ್ಕದ್ದಲ್ಲ.

**42. ಆರ್ಡಿನೆನ್ಸ್‌ಗಳ ರಚನೆಯ ಕಾರ್ಯವಿಧಾನ.–** (1) ಸಿಂಡಿಕೇಟು, ಇದರಲ್ಲಿ ಇನ್ನು ಮುಂದೆ ಉಪಬಂಧ ಕಲ್ಪಿಸಿದ ರೀತಿಯಲ್ಲಿ ಆರ್ಡಿನೆನ್ಸ್‌ಗಳನ್ನು ರಚಿಸಬಹುದು.

(2) ಆರ್ಡಿನೆನ್ಸ್‌ಗಳನ್ನು ರಚಿಸುವಲ್ಲಿ ಸಿಂಡಿಕೇಟು,–

(i) ಪರೀಕ್ಷಕರ ಕರ್ತವ್ಯಗಳ ಮೇಲೆ ಅಂಥ ಆರ್ಡಿನೆನ್ಸ್‌ಗಳು ಪರಿಣಾಮ ಬೀರುವಲ್ಲಿ ಸಂಬಂಧಪಟ್ಟ ಮಂಡಳಿ ಅಥವಾ ವ್ಯಾಸಂಗ ಮಂಡಳಿಗಳೊಡನೆ; ಮತ್ತು

(ii) ವ್ಯಾಸಂಗ ಕ್ರಮಗಳು, ಪರೀಕ್ಷೆಗಳನ್ನು ನಡೆಸುವುದು ಅಥವಾ ಅವುಗಳ ಗುಣಮಟ್ಟ ಅಥವಾ ವಿದ್ಯಾರ್ಥಿಗಳ ನಿವಾಸದ ಷರತ್ತುಗಳ ಮೇಲೆ ಅಂಥ ಆರ್ಡಿನೆನ್ಸ್‌ಗಳು ಪರಿಣಾಮ ಬೀರುವಲ್ಲಿ ಶೈಕ್ಷಣಿಕ ಪರಿಷತ್ತಿನೊಡನೆ,

– ಸಮಾಲೋಚಿಸತಕ್ಕದ್ದು.

(3) ಶೈಕ್ಷಣಿಕ ಪರಿಷತ್ತು ಪ್ರಸ್ತಾಪಿಸಿದ ಯಾವುದೇ ಆರ್ಡಿನೆನ್ಸಿನ ಕರಡನ್ನು ತಿದ್ದುಪಡಿ ಮಾಡಲು ಸಿಂಡಿಕೇಟಿಗೆ ಅಧಿಕಾರವಿರತಕ್ಕದ್ದಲ್ಲ. ಆದರೆ, ಅದು ಪ್ರಸ್ತಾವವನ್ನು ತಿರಸ್ಕರಿಸಬಹುದು ಅಥವಾ ಸಿಂಡಿಕೇಟು ಸೂಚಿಸಬಹುದಾದ ಅಂಥ ತಿದ್ದುಪಡಿಗಳೊಂದಿಗೆ, ಸಂಪೂರ್ಣವಾಗಿ ಅಥವಾ ಭಾಗಶಃ ಮರುಪರಿಶೀಲನೆಗಾಗಿ ಕರಡನ್ನು ಶೈಕ್ಷಣಿಕ ಪರಿಷತ್ತಿಗೆ ಹಿಂದಿರುಗಿಸಬಹುದು.

(4) ಸಿಂಡಿಕೇಟು ರಚಿಸಿದ ಎಲ್ಲಾ ಆರ್ಡಿನೆನ್ಸ್‌ಗಳು, ಅದು ನಿರ್ದೇಶಿಸಬಹುದಾದ ಅಂಥ ದಿನಾಂಕದಿಂದ ಪರಿಣಾಮಕಾರಿಯಾಗಿರತಕ್ಕದ್ದು. ಆದರೆ ಪ್ರತಿಯೊಂದು ಆರ್ಡಿನೆನ್ಸನ್ನು ಅದನ್ನು ರಚಿಸಿದ ದಿನದಿಂದ ಎರಡು ವಾರಗಳೊಳಗಾಗಿ, ಕುಲಾಧಿಪತಿಯವರಿಗೆ ಅವರ ಅನುಮೋದನೆಗಾಗಿ ಒಪ್ಪಿಸತಕ್ಕದ್ದು. ಕುಲಾಧಿಪತಿಯವರು, ಆರ್ಡಿನೆನ್ಸನ್ನು ಸ್ವೀಕರಿಸಿದ ನಾಲ್ಕು ವಾರಗಳೊಳಗಾಗಿ, ಯಾವುದೇ ಆರ್ಡಿನೆನ್ಸಿನ ಪ್ರವರ್ತನೆಯು ಅಮಾನತ್ತಿನಲ್ಲಿರತಕ್ಕದೆಂದು ಆದೇಶದ ಮೂಲಕ ನಿರ್ದೇಶಿಸಬಹುದು ಮತ್ತು ಅದಕ್ಕೆ ತಮ್ಮ ಆಕ್ಷೇಪಣೆಯನ್ನು ಸಾಧ್ಯವಾದಷ್ಟು ಬೇಗನೆ ಸಿಂಡಿಕೇಟಿಗೆ ತಿಳಿಸತಕ್ಕದ್ದು. ಸಿಂಡಿಕೇಟಿನ ಟೀಕೆ ಟಿಪ್ಪಣಿಗಳನ್ನು ಅವರು ಸ್ವೀಕರಿಸಿದ ತರುವಾಯ, ಅಮಾನತ್ತಿನ ಆದೇಶವನ್ನು ಹಿಂತೆಗೆದುಕೊಳ್ಳಬಹುದು ಅಥವಾ ಆರ್ಡಿನೆನ್ಸನ್ನು ಅಂಗೀಕರಿಸದಿರಬಹುದು. ಅವರ ನಿರ್ಣಯವು ಅಂತಿಮವಾಗಿರತಕ್ಕದ್ದು:

ಪರಂತು, ರಾಜ್ಯ ಸಂಚಿತನಿಧಿಯಿಂದ ವೆಚ್ಚಕ್ಕೆ ಸಂಬಂಧಿಸಿದ ವೆಚ್ಚವನ್ನು ಒಳಗೊಂಡ ಆರ್ಡಿನೆನ್ಸ್ ಸಂಬಂಧದಲ್ಲಿ ಕುಲಾಧಿಪತಿಯವರು ತಮ್ಮ ಅನುಮೋದನೆ ನೀಡುವ ಮೊದಲು ಸರ್ಕಾರದೊಡನೆ ಸಮಾಲೋಚಿಸತಕ್ಕದ್ದು.

(5) ಶೈಕ್ಷಣಿಕ ಪರಿಷತ್ತು ಪ್ರಸ್ತಾವಿಸಿದ ಆರ್ಡಿನೆನ್ಸಿನ ಕರಡನ್ನು ಸಿಂಡಿಕೇಟು ತಿರಸ್ಕರಿಸಿದಲ್ಲಿ, ಶೈಕ್ಷಣಿಕ ಪರಿಷತ್ತು, ಕುಲಾಧಿಪತಿಯವರಿಗೆ ಮೇಲ್ಮನವಿ ಮಾಡಿಕೊಳ್ಳಬಹುದು.

(6) ಕುಲಾಧಿಪತಿಯವರು, ಸಿಂಡಿಕೇಟಿನ ಟೀಕೆ ಟಿಪ್ಪಣಿಗಳನ್ನು ಪಡೆದ ತರುವಾಯ ಮೇಲ್ಮನವಿಯನ್ನು ತಿರಸ್ಕರಿಸಬಹುದು ಇಲ್ಲವೇ ಶೈಕ್ಷಣಿಕ ಪರಿಷತ್ತು ಪ್ರಸ್ತಾವಿಸಿದಂತೆ ಆರ್ಡಿನೆನ್ಸನ್ನು ಅನುಮೋದಿಸಬಹುದು. ತದನಂತರ ಆರ್ಡಿನೆನ್ಸನ್ನು ಸಿಂಡಿಕೇಟು ರಚಿಸಿದ್ದರೆ ಹೇಗೋ ಹಾಗೆ ಅದು ಪರಿಣಾಮಕಾರಿಯಾಗಿರತಕ್ಕದ್ದು.

**43. ವಿನಿಯಮಗಳು.–** (1) ಶೈಕ್ಷಣಿಕ ಪರಿಷತ್ತು, ತನಗೆ ಪ್ರದತ್ತವಾದ ಎಲ್ಲಾ ಅಥವಾ ಯಾವುವೇ ಅಧಿಕಾರಗಳನ್ನು ಚಲಾಯಿಸಲು ಉಪಬಂಧಿಸುವುದಕ್ಕಾಗಿ ಮತ್ತು ವಿಶೇಷವಾಗಿ ಈ ಮುಂದಿನ ವಿಷಯಗಳ ಬಗ್ಗೆ ಈ ಅಧ್ಯಾದೇಶ, ಪರಿನಿಯಮ ಮತ್ತು ಆರ್ಡಿನೆನ್ಸ್‌ಗಳಿಗೆ ಸುಸಂಗತವಾಗಿರುವ ವಿನಿಯಮಗಳನ್ನು ರಚಿಸಬಹುದು, ಎಂದರೆ:–

(i) ವಿಶ್ವವಿದ್ಯಾಲಯಕ್ಕೆ ವಿದ್ಯಾರ್ಥಿಗಳ ಪ್ರವೇಶ;

(ii) ಇತರ ವಿಶ್ವವಿದ್ಯಾಲಯಗಳ ಪರೀಕ್ಷೆಗಳು ಮತ್ತು ಪದವಿಗಳನ್ನು ವಿಶ್ವವಿದ್ಯಾಲಯದ ಪರೀಕ್ಷೆ ಮತ್ತು ಪದವಿಗಳಿಗೆ ಸಮನಾದುವೆಂದು ಮನ್ನಣೆ ನೀಡುವುದು;

(iii) ವಿಶ್ವವಿದ್ಯಾಲಯದ ವ್ಯಾಸಂಗ ಕ್ರಮಗಳು ಮತ್ತು ಪರೀಕ್ಷೆಗಳು ಮತ್ತು ವಿಶ್ವವಿದ್ಯಾಲಯದ ಅಥವಾ ಮಾನ್ಯತೆ ಪಡೆದ ಸಂಸ್ಥೆಗಳ ಅಥವಾ ಇತರ ವಿಶ್ವವಿದ್ಯಾಲಯಗಳ ಸಂಸ್ಥೆಗಳ ವಿದ್ಯಾರ್ಥಿಗಳನ್ನು ಯಾವ ಷರತ್ತುಗಳ ಮೇಲೆ ವಿಶ್ವವಿದ್ಯಾಲಯದ ಪರೀಕ್ಷೆಗಳು ಅಥವಾ ಪದವಿಗಳು ಇತರ ಡಿಪ್ಲೊಮಾಗಳು ಮತ್ತು ಸರ್ಟಿಫಿಕೇಟುಗಳಿಗೆ ಸೇರಿಸಿಕೊಳ್ಳತಕ್ಕದ್ದೋ ಆ ಷರತ್ತುಗಳು;

(iv) ವಿನಾಯಿತಿಗಳನ್ನು ನೀಡುವುದು.

(2) ಶೈಕ್ಷಣಿಕ ಪರಿಷತ್ತು ಅಂಗೀಕರಿಸಿದ ಎಲ್ಲ ವಿನಿಯಮಗಳನ್ನು ಕುಲಾಧಿಪತಿಯವರ ಅನುಮೋದನೆಗಾಗಿ ಒಪ್ಪಿಸಲು ಸರ್ಕಾರಕ್ಕೆ ಕಳುಹಿಸತಕ್ಕದ್ದು. ಸರ್ಕಾರವು, ವಿಶ್ವವಿದ್ಯಾಲಯದಿಂದ ಸ್ವೀಕರಿಸಿದ ವಿನಿಯಮಗಳನ್ನು ಅವುಗಳನ್ನು ಸ್ವೀಕರಿಸಿದ ದಿನದಿಂದ ಎರಡು ತಿಂಗಳೊಳಗೆ ತನ್ನ ಟೀಕೆ ಟಿಪ್ಪಣಿಗಳೊಡನೆ ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು. ಕುಲಾಧಿಪತಿಯವರು, ವಿನಿಯಮಗಳನ್ನು ಸರ್ಕಾರದಿಂದ ಸ್ವೀಕರಿಸಿದ ದಿನದಿಂದ ಒಂದು ತಿಂಗಳೊಳಗೆ ಅವುಗಳನ್ನು ಅನುಮೋದಿಸಬಹುದು ಅಥವಾ ಮರುಪರಿಶೀಲನೆಗಾಗಿ ಅವುಗಳನ್ನು ಶೈಕ್ಷಣಿಕ ಪರಿಷತ್ತಿಗೆ ಹಿಂದಿರುಗಿಸಬಹುದು.

(3) ಪ್ರತಿಯೊಂದು ವಿನಿಯಮವು, ಕುಲಾಧಿಪತಿಯವರು ಅವುಗಳನ್ನು ಅನುಮೋದಿಸಿದ ದಿನಾಂಕದಿಂದ ಅಥವಾ ಕುಲಾಧಿಪತಿಯವರು ನಿರ್ದೇಶಿಸಬಹುದಾದ ಅಂಥ ಇತರ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**44. ನಿಯಮಗಳು.–** (1) ಸಿಂಡಿಕೇಟು, ಈ ಅಧ್ಯಾದೇಶ, ಪರಿನಿಯಮಗಳು, ಆರ್ಡಿನೆನ್ಸ್‌ಗಳು ಮತ್ತು ವಿನಿಯಮಗಳಿಗೆ ಸುಸಂಗತವಾದ ನಿಯಮಗಳನ್ನು ರಚಿಸಬಹುದು.

(2) ನಿಯಮಗಳು,–

(i) ಪ್ರತಿಯೊಂದು ಪ್ರಾಧಿಕಾರದ ಅಥವಾ ಮಂಡಳಿಯ ಸದಸ್ಯರಿಗೆ, ಸಭೆಗಳ ದಿನಾಂಕ ಮತ್ತು ಆ ಸಭೆಗಳಲ್ಲಿ ನಡೆಸಬೇಕಾದ ವ್ಯವಹಾರದ ಬಗ್ಗೆ ನೋಟೀಸನ್ನು ಕೊಡುವುದು ಹಾಗೂ ಆ ಸಭೆಗಳ ನಡವಳಿಗಳ ದಾಖಲೆಯನ್ನು ಇಡುವುದು;

(ii) ಸಭೆಗಳಲ್ಲಿ ಅನುಸರಿಸಬೇಕಾದ ಪ್ರಕ್ರಿಯೆ ಮತ್ತು ಸಭೆಗಳ ಕೋರಂಗಾಗಿ ಅಗತ್ಯವಿರುವ ಸದಸ್ಯರ ಸಂಖ್ಯೆ; ಮತ್ತು

(iii) ಅಂಥ ಪ್ರಾಧಿಕಾರ ಅಥವಾ ಮಂಡಳಿಗೆ ಮಾತ್ರವೇ ಸಂಬಂಧಿಸಿದ ಮತ್ತು ಈ ಅಧ್ಯಾದೇಶ, ಪರಿನಿಯಮಗಳು, ಆರ್ಡಿನೆನ್ಸ್‌ಗಳು ಅಥವಾ ವಿನಿಯಮಗಳ ಮೂಲಕ ಉಪಬಂಧ ಕಲ್ಪಿಸದೆ ಇರುವ ಎಲ್ಲ ವಿಷಯಗಳು,

–ಇವುಗಳಿಗಾಗಿ ಉಪಬಂಧ ಕಲ್ಪಿಸಬಹುದು.

(3) ಈ ಪ್ರಕರಣದ ಅಡಿಯಲ್ಲಿ ರಚಿತವಾದ ಪ್ರತಿಯೊಂದು ನಿಯಮವು, ಸಿಂಡಿಕೇಟಿನ ಅನುಮೋದನೆ ಪಡೆದ ದಿನಾಂಕದಂದು ಜಾರಿಗೆ ಬರತಕ್ಕದ್ದು.

## ಅಧ್ಯಾಯ – VI

## ಹಣಕಾಸು ಮತ್ತು ಲೆಕ್ಕಪತ್ರಗಳು

**45. ವಿಶ್ವವಿದ್ಯಾಲಯದ ನಿಧಿಗಳು.–** (1) ಈ ಕೆಳಕಂಡ ಯಾವುವೇ ಮೂಲಗಳಿಂದ ಸ್ವೀಕರಿಸಿದ ಮೊಬಲಗುಗಳು ವಿಶ್ವವಿದ್ಯಾಲಯದ ನಿಧಿಯ ಭಾಗವಾಗಿರತಕ್ಕದ್ದು,–

(i) ವಿಶ್ವವಿದ್ಯಾಲಯದ ಅನುದಾನ ಆಯೋಗವು ಅಥವಾ ಕೇಂದ್ರ ಸರ್ಕಾರವು ನೀಡಿದ ಯಾವುದೇ ವಂತಿಗೆ ಅಥವಾ ಅನುದಾನ;

(ii) ಸರ್ಕಾರವು ನೀಡಿದ ಯಾವುದೇ ವಂತಿಗೆ ಅಥವಾ ಅನುದಾನ;

(iii) ಖಾಸಗಿ ವ್ಯಕ್ತಿಗಳು ಅಥವಾ ಸಂಸ್ಥೆಗಳು ನೀಡಿದ ಯಾವುದೇ ಉಯಿಲಿನ ಮೂಲಕವಾಗಿ ದೊರೆತ ಸ್ವತ್ತು, ದೇಣಿಗೆಗಳು, ದತ್ತಿಗಳು ಅಥವಾ ಇತರ ಅನುದಾನಗಳು;

(iv) ಫೀಜು ಮತ್ತು ಚಾರ್ಜುಗಳ ಮೂಲಕ ವಿಶ್ವವಿದ್ಯಾಲಯವು ಸ್ವೀಕರಿಸಿದ ಆದಾಯ;

(v) ಕೈಗಾರಿಕೆಗಳು, ವ್ಯಾಪಾರಿಗಳು ಅಥವಾ ಉದ್ದಿಮೆದಾರರಿಂದ ಯಾವುದೇ ವಂತಿಗೆ ಅಥವಾ ಉಯಿಲಿನ ಮೂಲಕವಾಗಿ ದೊರೆತ ಸ್ವತ್ತು;

(vi) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿಗೆ ಒಳಪಟ್ಟು ವಿದೇಶಿ ಸರ್ಕಾರಗಳಿಂದ ಅಥವಾ ಯಾವುದೇ ವಿದೇಶಿ ಸಂಸ್ಥೆಗಳಿಂದ ಅಥವಾ ಕಂಪನಿಗಳಿಂದ ಯಾವುದೇ ವಂತಿಗೆ ಅಥವಾ ದತ್ತಿಗಳು; ಮತ್ತು

(vii) ಯಾವುದೇ ಇತರ ಮೂಲದಿಂದ ಸ್ವೀಕರಿಸಿದ ಮೊಬಲಗುಗಳು.

(2) ಸದರಿ ನಿಧಿಯನ್ನು, ಭಾರತದ ರಿಸರ್ವ್ ಬ್ಯಾಂಕ್ ಅಧಿನಿಯಮ, 1934ರಲ್ಲಿ ಪರಿಭಾಷಿಸಿದಂತೆ ಅನುಸೂಚಿತ ಬ್ಯಾಂಕಿನಲ್ಲಿ ಅಥವಾ ಬ್ಯಾಂಕಿಂಗ್ ಕಂಪನಿಗಳ (ಉದ್ಯಮಗಳ ಆರ್ಜನೆ ಮತ್ತು ವರ್ಗಾವಣೆ) ಅಧಿನಿಯಮ, 1970ರ ಮೇರೆಗೆ ರಚಿತವಾದ ಹೊಸ ಸಂವಾದಿ ಬ್ಯಾಂಕಿನಲ್ಲಿ ಇಡತಕ್ಕದ್ದು ಅಥವಾ ಸಿಂಡಿಕೇಟು ತೀರ್ಮಾನಿಸಬಹುದಾದಂತೆ, ಭಾರತ ನ್ಯಾಸ ಅಧಿನಿಯಮ, 1882ರ ಮೂಲಕ ಪ್ರಾಧಿಕೃತವಾದ ಭದ್ರತೆಗಳಲ್ಲಿ ಹೂಡಬಹುದು.

(3) ಪರಿನಿಯಮಗಳ ಮೂಲಕ ನಿಯಮಿಸಬಹುದಾದ ರೀತಿಯಲ್ಲಿ, ವಿಶ್ವವಿದ್ಯಾಲಯದ ಯಾವುದೇ ಉದ್ದೇಶಗಳಿಗಾಗಿ ಸದರಿ ನಿಧಿಯನ್ನು ವಿನಿಯೋಗಿಸಬಹುದು.

**46. ವಾರ್ಷಿಕ ಲೆಕ್ಕ ಪತ್ರಗಳು ಮತ್ತು ಲೆಕ್ಕ ಪರಿಶೋಧನೆ.–** (1) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕಪತ್ರಗಳನ್ನು ಸಿಂಡಿಕೇಟಿನ ನಿರ್ದೇಶನದ ಮೇರೆಗೆ ತಯಾರಿಸತಕ್ಕದ್ದು.

(2) ಹಾಗೆ ತಯಾರಿಸಿದ ವಾರ್ಷಿಕ ಲೆಕ್ಕ ಪತ್ರಗಳನ್ನು, ಶೈಕ್ಷಣಿಕ ಪರಿಷತ್ತು ತನ್ನ ಮುಂದಿನ ನಿಕಟ ಸಭೆಯಲ್ಲಿ ಪರಿಗಣಿಸತಕ್ಕದ್ದು. ಶೈಕ್ಷಣಿಕ ಪರಿಷತ್ತು ಆ ಸಂಬಂಧವಾಗಿ ಒಂದು ನಡವಳಿಯನ್ನು ಅಂಗೀಕರಿಸಬಹುದು ಮತ್ತು ಅದನ್ನು ಸಿಂಡಿಕೇಟಿಗೆ ತಿಳಿಸತಕ್ಕದ್ದು. ಶೈಕ್ಷಣಿಕ ಪರಿಷತ್ತು ಮಾಡಿದ ಸಲಹೆಗಳನ್ನು ಸಿಂಡಿಕೇಟು ಪರಿಗಣಿಸತಕ್ಕದ್ದು ಮತ್ತು ಅದರ ಮೇಲೆ ತಾನು ಸೂಕ್ತವೆಂದು ಭಾವಿಸುವಂಥ ರೀತಿಯಲ್ಲಿ ಕ್ರಮ ಕೈಗೊಳ್ಳತಕ್ಕದ್ದು ಹಾಗೂ ತಾನು ಕೈಗೊಂಡ ಕ್ರಮದ ಬಗ್ಗೆ ಅಥವಾ ಕ್ರಮ ಕೈಗೊಳ್ಳದಿರಲು ಇರುವ ಕಾರಣಗಳನ್ನು ಅದರ ಮುಂದಿನ ಸಭೆಯಲ್ಲಿ ಶೈಕ್ಷಣಿಕ ಪರಿಷತ್ತಿಗೆ ತಿಳಿಸತಕ್ಕದ್ದು.

(3) ವಿಶ್ವವಿದ್ಯಾಲಯದ ಲೆಕ್ಕ ಪತ್ರಗಳನ್ನು ವರ್ಷಕ್ಕೊಮ್ಮೆ, ಏಪ್ರಿಲ್ ತಿಂಗಳಲ್ಲಿ ರಾಜ್ಯ ಲೆಕ್ಕ ಪತ್ರ ನಿಯಂತ್ರಕರು ಪರಿಶೋಧಿಸತಕ್ಕದ್ದು.

(4) ಹಾಗೆ ಪರಿಶೋಧಿಸಿದ ಲೆಕ್ಕ ಪತ್ರಗಳನ್ನು ಶೈಕ್ಷಣಿಕ ಪರಿಷತ್ತಿನ ಮುಂದೆ ಮತ್ತು ಸಿಂಡಿಕೇಟಿನ ಮುಂದೆ ಮಂಡಿಸತಕ್ಕದ್ದು ಹಾಗೂ ತದನಂತರ ಪ್ರತಿ ವರ್ಷ ಸೆಪ್ಟೆಂಬರ್ ಕೊನೆಯೊಳಗೆ ತನ್ನ ಆಕ್ಷೇಪಗಳೊಡನೆ ಸರ್ಕಾರಕ್ಕೆ ಕಳುಹಿಸತಕ್ಕದ್ದು. ಸರ್ಕಾರವು ಅದನ್ನು ರಾಜ್ಯ ವಿಧಾನ ಮಂಡಲದ ಉಭಯ ಸದನಗಳ ಮುಂದೆ ಶೀಘ್ರದಲ್ಲಿ ಬರುವ ಮುಂದಿನ ಅಧಿವೇಶನದಲ್ಲಿ ಮಂಡಿಸತಕ್ಕದ್ದು.

**47. ಹಣಕಾಸಿನ ಅಂದಾಜುಗಳು.–** (1) ಸಿಂಡಿಕೇಟು, ಪರಿನಿಯಮಗಳ ಮೂಲಕ ನಿಯಮಿಸಬಹುದಾದ ಅಂಥ ದಿನಾಂಕಕ್ಕೆ ಮೊದಲು ಮುಂಬರುವ ವರ್ಷದ ಹಣಕಾಸು ಅಂದಾಜುಗಳನ್ನು ಹಣಕಾಸು ಅಧಿಕಾರಿಯ ನೆರವಿನೊಡನೆ ತಯಾರಿಸತಕ್ಕದ್ದು ಮತ್ತು ಅವುಗಳನ್ನು ಹಣಕಾಸು ಸಮಿತಿಯಿಂದ ಪರಿಶೋಧಿಸುವಂತೆ ಮಾಡತಕ್ಕದ್ದು ಹಾಗೂ ಅವುಗಳನ್ನು ಶೈಕ್ಷಣಿಕ ಪರಿಷತ್ತಿನ ಮುಂದೆ ಇಡತಕ್ಕದ್ದು.

(2) ಸಿಂಡಿಕೇಟು, ಬಜೆಟ್ಟಿನಲ್ಲಿ ಒದಗಿಸಲಾದ ಮೊಬಲಗಿಗಿಂತ ಹೆಚ್ಚಿನ ಖರ್ಚನ್ನು ವಹಿಸಬೇಕಾಗಿರುವಲ್ಲಿ ಅಥವಾ ಜರೂರು ಸಂದರ್ಭದಲ್ಲಿ, ಕಾರಣಗಳನ್ನು ಲಿಖಿತದಲ್ಲಿ ದಾಖಲಿಸಿ, ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಿದಂಥ ನಿರ್ಬಂಧಗಳು ಮತ್ತು ಷರತ್ತುಗಳಿಗೊಳಪಟ್ಟು ವೆಚ್ಚವನ್ನು ವಹಿಸಬಹುದು. ಅಂಥ ಹೆಚ್ಚಿನ ವೆಚ್ಚಕ್ಕೆ ಸಂಬಂಧಿಸಿದಂತೆ, ಬಜೆಟ್ಟಿನಲ್ಲಿ ಯಾವುದೇ ಅವಕಾಶವನ್ನು ಮಾಡಿಲ್ಲದಿದ್ದರೆ, ಶೈಕ್ಷಣಿಕ ಪರಿಷತ್ತಿಗೆ ಅದರ ಮುಂದಿನ ಸಭೆಯಲ್ಲಿ ವರದಿಯನ್ನು ಮಾಡತಕ್ಕದ್ದು.

(3) ವಿಶ್ವವಿದ್ಯಾಲಯದ ಬಜೆಟ್ ಅಂದಾಜನ್ನು, ತನ್ನ ಸಂಪನ್ಮೂಲಗಳ ಸಂಗ್ರಹಣೆ ಮಾಡುವುದೂ ಒಳಗೊಂಡಂತೆ ಸರ್ಕಾರ ಮತ್ತು ಎಲ್ಲ ಇತರ ಮೂಲಗಳಿಂದ ನಿರೀಕ್ಷಿಸಲಾದ ಅನುದಾನಗಳನ್ನು ಗಮನದಲ್ಲಿಟ್ಟು ತಯಾರಿಸತಕ್ಕದ್ದು. ಆದಾಗ್ಯೂ, ಪೂರಕ ಬಜೆಟನ್ನು ಹೆಚ್ಚಿನ ಅನುದಾನಗಳ ನಿರೀಕ್ಷೆಯಿಂದ ಪ್ರತಿ ವರ್ಷದ ಅಕ್ಟೋಬರ್‌ನಲ್ಲಿ ಸಿಂಡಿಕೇಟಿನ ಮುಂದೆ ಇಡಬಹುದು. ಆದರೆ, ಈ ಬಗ್ಗೆ ಯಾವುದೇ ವೆಚ್ಚವನ್ನು, ಅಂಥ ಹೆಚ್ಚಿನ ಅನುದಾನ ಸ್ವೀಕರಿಸಿದ ಹೊರತು ಭರಿಸತಕ್ಕದ್ದಲ್ಲ.

(4) ವಿಶ್ವವಿದ್ಯಾಲಯವು, ಸರ್ಕಾರದ ಪೂರ್ವಾನುಮೋದನೆಯಿಲ್ಲದೆ, ಮೀಸಲಿಟ್ಟ ನಿಧಿಗಳನ್ನು ಇತರ ಉದ್ದೇಶಗಳಿಗಾಗಿ ಪಲ್ಲಟ ಮಾಡತಕ್ಕದ್ದಲ್ಲ ಅಥವಾ ಅದರ ಸಿಬ್ಬಂದಿ ವರ್ಗದ ವೇತನ ಶ್ರೇಣಿಗಳನ್ನು ಪರಿಷ್ಕರಿಸತಕ್ಕದ್ದಲ್ಲ ಅಥವಾ ಸರ್ಕಾರದಿಂದ ಯಾವುದೇ ಸರಿಸಮಾನ ವಂತಿಗೆಗಳನ್ನು ಒಳಗೊಳ್ಳುವಂಥ ಯಾವುವೇ ಯೋಜನೆಗಳನ್ನು ಅಥವಾ ಪುರಸ್ಕರಣ ಪ್ರಾಧಿಕಾರಿಗಳಿಂದ ಸಹಾಯವು ನಿಂತುಹೋದ ತರುವಾಯ ಸರ್ಕಾರದ ಮೇಲೆ ಆವರ್ತಕ ಹೊಣೆಗಾರಿಕೆಯನ್ನು ವಿಧಿಸುವಂಥ ಯಾವುದೇ ಯೋಜನೆಯನ್ನು ಕಾರ್ಯಗತಗೊಳಿಸತಕ್ಕದ್ದಲ್ಲ:

ಪರಂತು, ವಿಶ್ವವಿದ್ಯಾಲಯದ ಮೇಲೆ ಆವರ್ತಕ ಹೊಣೆಗಾರಿಕೆಯನ್ನು ವಿಧಿಸುವ ಯೋಜನೆ ಅಥವಾ ಕಾರ್ಯಕ್ರಮಕ್ಕೆ, ಆದರೆ, ವಿಶ್ವವಿದ್ಯಾಲಯದ ಅನುದಾನ ಆಯೋಗದಿಂದ, ಕೇಂದ್ರ ಸರ್ಕಾರದಿಂದ ಅಥವಾ ಸಂಸ್ಥೆಗಳಿಂದ ಪ್ರಾಪ್ತವಾದ ಬಡ್ಡಿಯಿಂದ ಅಥವಾ ವಂತಿಗೆಯಿಂದ ಅಥವಾ ದೇಣಿಗೆಗಳಿಂದ ಅಥವಾ ವ್ಯಕ್ತಿಗಳಿಂದ ಅಥವಾ ವೈಯಕ್ತಿಕ ಅಥವಾ ಸಂಸ್ಥೆಗಳಿಂದ ದತ್ತಿಯಾಗಿ ಬಂದ ಮೊಬಲಗಿಗೆ ಪೂರ್ವಾನುಮೋದನೆಯ ಆವಶ್ಯಕತೆ ಇರುವುದಿಲ್ಲ ಮತ್ತು ಅಂಥ ಆವರ್ತಕ ಹೊಣೆಗಾರಿಕೆಯು ಸರ್ಕಾರದ ಮೇಲೆ ಯಾವುದೇ ಹೊರೆಯಾಗುವುದಿಲ್ಲ ಮತ್ತು ಆ ಸಂಬಂಧದ ಸಂಪೂರ್ಣ ವೆಚ್ಚವನ್ನು ವಿಶ್ವವಿದ್ಯಾಲಯದ ನಿಧಿಯಿಂದ ಭರಿಸತಕ್ಕದ್ದು.

**48. ಲೆಕ್ಕಪರಿಶೋಧನೆಗೆ ನಿರ್ದೇಶಿಸಲು ಸರ್ಕಾರದ ಅಧಿಕಾರ.–** (1) ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ಸಂಸ್ಥೆಗಳೂ ಒಳಗೊಂಡಂತೆ ವಿಶ್ವವಿದ್ಯಾಲಯದ ಲೆಕ್ಕ ಪತ್ರಗಳ ಪರಿಶೋಧನೆ ಅವಶ್ಯವೆಂದು ಭಾವಿಸಿದಾಗಲೆಲ್ಲಾ ಅದು ನಿರ್ದಿಷ್ಟಪಡಿಸಬಹುದಾದಂತೆ ಅಂಥ ಲೆಕ್ಕ ಪರಿಶೋಧಕರಿಂದ ಲೆಕ್ಕ ಪರಿಶೋಧನೆಯಾಗಬೇಕೆಂದು ನಿರ್ದೇಶಿಸಲು ಸರ್ಕಾರಕ್ಕೆ ಅಧಿಕಾರವಿರತಕ್ಕದ್ದು.

(2) ಮಹಾಲೇಖಪಾಲರಿಂದ ವಿಶ್ವವಿದ್ಯಾಲಯದ ಲೆಕ್ಕ ಪತ್ರಗಳ ಪರಿಶೋಧನೆಯಾದಾಗ ಮತ್ತು ಆಕ್ಷೇಪಗಳೊಡನೆ ವರದಿಯನ್ನು ಅಥವಾ ಸ್ಪಷ್ಟೀಕರಣಗಳಿಗಾಗಿ ತಡೆಹಿಡಿದ ಬಾಬುಗಳ ಸಂಬಂಧದಲ್ಲಿ ಹೆಚ್ಚಿನ ಟೀಕೆಟಿಪ್ಪಣಿಗಳು ಅಥವಾ ಷರಾಗಳಿಗಾಗಿ ವಿಶ್ವವಿದ್ಯಾಲಯಕ್ಕೆ ಲಭ್ಯವಾಗುವಂತೆ ಮಾಡತಕ್ಕದ್ದು. ವಿಶ್ವವಿದ್ಯಾಲಯವು ಅಂಥ ವರದಿಯನ್ನು ಸ್ವೀಕರಿಸಿದ ದಿನದಿಂದ ಮೂವತ್ತು ದಿನಗಳ ಒಳಗಾಗಿ ತನ್ನ ಟೀಕೆಟಿಪ್ಪಣಿಗಳನ್ನು ಅಥವಾ ಷರಾಗಳನ್ನು ಸರ್ಕಾರದ ಮೂಲಕ ಮಹಾಲೇಖಪಾಲರಿಗೆ ಕಳುಹಿಸತಕ್ಕದ್ದು.

**49. ವಾರ್ಷಿಕ ವರದಿ.–** (1) ಸಿಂಡಿಕೇಟು, ಪ್ರತಿ ಹಣಕಾಸು ವರ್ಷಕ್ಕೆ ವಿಶ್ವವಿದ್ಯಾಲಯದ ಚಟುವಟಿಕೆಗಳು, ಗುರಿ ಮತ್ತು ಸಾಧನೆಗಳನ್ನು ಸ್ಪಷ್ಟವಾಗಿ ವಿವರಿಸುವ ಎಲ್ಲ ವಿವರಗಳನ್ನು ಒಳಗೊಂಡ ಒಂದು ವಾರ್ಷಿಕ ವರದಿಯನ್ನು ತಯಾರಿಸತಕ್ಕದ್ದು ಮತ್ತು ಜೂನ್ 30ನೇ ದಿನಾಂಕದೊಳಗೆ ಶೈಕ್ಷಣಿಕ ಪರಿಷತ್ತಿಗೆ ಸಲ್ಲಿಸತಕ್ಕದ್ದು. ಶೈಕ್ಷಣಿಕ ಪರಿಷತ್ತು ಅದರ ಮೇಲೆ ಗೊತ್ತುವಳಿಯನ್ನು ಅಂಗೀಕರಿಸಬಹುದು ಮತ್ತು ಅದರ ಪಾಲನೆಗಾಗಿ ವಾರ್ಷಿಕ ವರದಿಯನ್ನು ಸಿಂಡಿಕೇಟಿಗೆ ಹಿಂದಿರುಗಿಸತಕ್ಕದ್ದು. ಸಿಂಡಿಕೇಟು ಅದರಂತೆ ಕ್ರಮ ಕೈಗೊಳ್ಳತಕ್ಕದ್ದು. ಅದರ ಮೇಲೆ ಕೈಗೊಂಡ ಕ್ರಮದ ಬಗ್ಗೆ ಶೈಕ್ಷಣಿಕ ಪರಿಷತ್ತಿಗೆ, ಶೀಘ್ರದಲ್ಲಿ ಬರುವ ಅದರ ಮುಂಬರುವ ಸಭೆಯಲ್ಲಿ ತಿಳಿಸತಕ್ಕದ್ದು.

(2) ಶೈಕ್ಷಣಿಕ ಪರಿಷತ್ತಿನ ಗೊತ್ತುವಳಿಗಳನ್ನು ಅಳವಡಿಸಿದ ವಾರ್ಷಿಕ ವರದಿಯ ಪ್ರತಿಗಳನ್ನು ಪ್ರತಿ ವರ್ಷದ ಸೆಪ್ಟೆಂಬರ್ 30ನೇ ದಿನಾಂಕಕ್ಕೆ ಮೊದಲು ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಸರ್ಕಾರವು, ಅದನ್ನು ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಶೀಘ್ರದಲ್ಲಿ ಬರುವ ಮುಂದಿನ ಅಧಿವೇಶನದಲ್ಲಿ ಮಂಡಿಸತಕ್ಕದ್ದು.

## ಅಧ್ಯಾಯ – VII

### ಪ್ರಾಧಿಕಾರಗಳಲ್ಲಿ ಖಾಲಿ ಸ್ಥಾನಗಳು

**50. ಪದವನ್ನು ತೆರವುಗೊಳಿಸುವುದು.–** (1) ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ನಿಕಾಯದ ಪದನಿಮಿತ್ತ ಸದಸ್ಯರಲ್ಲದ ಯಾವೊಬ್ಬ ಸದಸ್ಯರು, ತಮ್ಮ ಪದಕ್ಕೆ ರಾಜೀನಾಮೆ ನೀಡಬಹುದು. ಸದಸ್ಯರು ತಮ್ಮ ಹಸ್ತಾಕ್ಷರದಲ್ಲಿ ಬರೆದ ರಾಜೀನಾಮೆ ಪತ್ರವನ್ನು ಕುಲಪತಿಯವರಿಗೆ ಕಳುಹಿಸತಕ್ಕದ್ದು. ಅಂಥ ರಾಜೀನಾಮೆಯನ್ನು ಅಂಗೀಕರಿಸಿದ ಕೂಡಲೇ ಅದು ಜಾರಿಗೆ ಬರತಕ್ಕದ್ದು ಮತ್ತು ಸಂಬಂಧಪಟ್ಟವರಿಗೆ ಅದನ್ನು ತಿಳಿಸತಕ್ಕದ್ದು.

(2) ವಿಶ್ವವಿದ್ಯಾಲಯದ ಪ್ರಾಧಿಕಾರದಲ್ಲಿ ಅಥವಾ ನಿಕಾಯದಲ್ಲಿ ಯಾವೊಬ್ಬ ಸದಸ್ಯನು, ತನ್ನ ಸಾಮರ್ಥ್ಯದಲ್ಲಿ ಒಂದು ನಿರ್ದಿಷ್ಟ ನಿಕಾಯದ ಸದಸ್ಯನಾಗಿ ಅಥವಾ ಅಧ್ಯಾಪಕನಾಗಿ ನಾಮ ನಿರ್ದೇಶಿತನಾಗಿದ್ದರೆ ಅಥವಾ ಒಂದು ನಿರ್ದಿಷ್ಟ ನೇಮಕಾತಿಯನ್ನು ಹೊಂದಿರುವನೆಂದು ವ್ಯಕ್ತವಾಗಿ ಹಾಗೆ ಹೇಳಿದ್ದರೆ, ಆ ನಿರ್ದಿಷ್ಟ ನಿಕಾಯದ ಸದಸ್ಯನಾಗಿ ಅಥವಾ ಸಂದರ್ಭಾನುಸಾರ ಅಧ್ಯಾಪಕನಾಗಿ ಅಥವಾ ನಿರ್ದಿಷ್ಟ ನೇಮಕಾತಿಯಲ್ಲಿ ಆತನು ಮುಂದುವರೆಯುವವರೆಗೆ ಮಾತ್ರವೇ, ಅಂಥ ಪ್ರಾಧಿಕಾರದ ಅಥವಾ ನಿಕಾಯದ ಸದಸ್ಯನಾಗಿ ಮುಂದುವರೆಯತಕ್ಕದ್ದು:

ಪರಂತು, ವಯೋನಿವೃತ್ತಿ ಹೊಂದಿದ ನಂತರ ಶೈಕ್ಷಣಿಕ ವರ್ಷದ ಅಂತ್ಯದವರೆಗೆ ಮರು ನೇಮಕಾತಿ ಆಧಾರದ ಮೇಲೆ ಮುಂದುವರಿದಂಥ ಅಧ್ಯಾಪಕರು ವಯೋನಿವೃತ್ತಿ ನಂತರ ಅಂಥ ಪ್ರಾಧಿಕಾರ ಅಥವಾ ನಿಕಾಯದ ಸದಸ್ಯರಾಗಿರುವುದು ನಿಂತುಹೋಗತಕ್ಕದ್ದು.

(3) ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ನಿಕಾಯದ ಒಬ್ಬ ಸದಸ್ಯರು, ನೈತಿಕ ಅಧ:ಪತನದ ಯಾವುದೇ ಅಪರಾಧಕ್ಕಾಗಿ ನ್ಯಾಯಾಲಯದಿಂದ ಅಪರಾಧ ನಿರ್ಣೀತವಾದ ಮೇಲೆ, ಅವರು ಸದಸ್ಯರಾಗಿರುವುದು ನಿಂತು ಹೋಗತಕ್ಕದ್ದು.

**51. ಖಾಲಿ ಸ್ಥಾನಗಳನ್ನು ಭರ್ತಿ ಮಾಡುವುದು.–** ನಿಧನ, ರಾಜೀನಾಮೆ, ವಜಾ ಅಥವಾ ಅನ್ಯಥಾ ಕಾರಣದಿಂದ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಇತರ ನಿಕಾಯದ ಪದನಿಮಿತ್ತ ಸದಸ್ಯರಲ್ಲದ ಸದಸ್ಯರ ಪದದಲ್ಲಿ ಉಂಟಾದ ಎಲ್ಲಾ ಖಾಲಿ ಸ್ಥಾನಗಳನ್ನು, ಖಾಲಿಯಾದ ಸ್ಥಾನದ

ಸದಸ್ಯರನ್ನು ನಾಮನಿರ್ದೇಶನ ಮಾಡಿದ ವ್ಯಕ್ತಿ ಅಥವಾ ನಿಕಾಯದಿಂದ ಆದಷ್ಟು ಶೀಘ್ರವಾಗಿ ಭರ್ತಿ ಮಾಡತಕ್ಕದ್ದು ಮತ್ತು ಹಾಗೆ ನಾಮನಿರ್ದೇಶನಗೊಂಡ ವ್ಯಕ್ತಿಯು, ಅಂಥ ಪ್ರಾಧಿಕಾರ ಅಥವಾ ನಿಕಾಯದಲ್ಲಿ ಯಾವ ಸದಸ್ಯರ ಸ್ಥಾನಕ್ಕೆ ನಾಮನಿರ್ದೇಶನಗೊಂಡಿರುವರೋ ಅಂಥ ಸದಸ್ಯರು ಆ ಪದದಲ್ಲಿ ಮುಂದುವರಿಯುತಿದ್ದಿರಬಹುದಾದಂಥ ಉಳಿದ ಅವಧಿಗೆ ಸದಸ್ಯರಾಗಿರತಕ್ಕದ್ದು:

ಪರಂತು, ಮೇಲೆ ಹೇಳಿದ ರೀತಿಯಲ್ಲಿ ಯಾವೊಬ್ಬ ವ್ಯಕ್ತಿಯನ್ನು ನಾಮನಿರ್ದೇಶನ ಮಾಡಿ ಯಾವುದೇ ಅಂಥ ಖಾಲಿ ಸ್ಥಾನವನ್ನು ಭರ್ತಿ ಮಾಡುವವರೆಗೆ, ಈ ಅಧ್ಯಾದೇಶದ ಉಪಬಂಧಗಳ ಅಡಿಯಲ್ಲಿ ಅಂಥ ಖಾಲಿ ಸ್ಥಾನದ ಭರ್ತಿಗೆ ಅರ್ಹರಾದಂಥ ವ್ಯಕ್ತಿಯನ್ನು ನಾಮನಿರ್ದೇಶನ ಮಾಡುವ ವ್ಯಕ್ತಿ ಅಥವಾ ನಿಕಾಯವು, ನಾಮನಿರ್ದೇಶನ ಮಾಡುವ ಮೂಲಕ ಆ ಖಾಲಿ ಸ್ಥಾನವನ್ನು ಭರ್ತಿ ಮಾಡಬಹುದು ಮತ್ತು ಹಾಗೆ ನಾಮನಿರ್ದೇಶನಗೊಂಡ ವ್ಯಕ್ತಿಯು ಈ ಅಧ್ಯಾದೇಶದ ಉಪಬಂಧಗಳ ಅಡಿಯಲ್ಲಿ ಬೇರೊಬ್ಬ ವ್ಯಕ್ತಿಯನ್ನು ನಾಮನಿರ್ದೇಶನ ಮಾಡುವವರೆಗೆ ಅಂಥ ಪ್ರಾಧಿಕಾರ ಅಥವಾ ನಿಕಾಯದ ಸದಸ್ಯನಾಗಿ ಪದಧಾರಣ ಮಾಡತಕ್ಕದ್ದು:

ಅಲ್ಲದೆ ಪರಂತು, ಅಂಥ ಯಾವುದೇ ಆಕಸ್ಮಿಕ ಖಾಲಿ ಸ್ಥಾನವು, ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಇತರ ನಿಕಾಯದ ಸದಸ್ಯರ ಪದಾವಧಿಯು ಮುಕ್ತಾಯವಾಗುವ ದಿನಾಂಕಕ್ಕೆ ಮುಂಚಿನ ಆರು ತಿಂಗಳೊಳಗಾಗಿ ಉಂಟಾದರೆ, ಅಂಥ ಯಾವುದೇ ಖಾಲಿ ಸ್ಥಾನವನ್ನು ಭರ್ತಿ ಮಾಡತಕ್ಕದ್ದಲ್ಲ.

## ಅಧ್ಯಾಯ – VIII

### ವಿಶ್ವವಿದ್ಯಾಲಯದ ಅಧ್ಯಾಪಕರು ಮತ್ತು ಇತರ ನೌಕರರ ನೇಮಕಾತಿ

**52. ಬೋಧಕರ ಮತ್ತು ಗ್ರಂಥಪಾಲರ ನೇಮಕಾತಿ.–** (1) ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕರು ಮತ್ತು ಗ್ರಂಥಪಾಲರಾಗಿ ನೇಮಕ ಮಾಡಿಕೊಳ್ಳಲು ವ್ಯಕ್ತಿಗಳ ಆಯ್ಕೆಗಾಗಿ ಪ್ರತ್ಯೇಕ ನೇಮಕಾತಿ ಮಂಡಳಿ ಇರತಕ್ಕದ್ದು.

(2) ಅಂಥ ಪ್ರತಿಯೊಂದು ಆಯ್ಕೆ ಮಂಡಳಿಯು,–

(ಎ) ಪ್ರಾಧ್ಯಾಪಕರು, ಸಹ ಪ್ರಾಧ್ಯಾಪಕರು ಮತ್ತು ಸಹಾಯಕ ಪ್ರಾಧ್ಯಾಪಕರ ಆಯ್ಕೆಗಾಗಿ, ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಪತಿ–ಪದನಿಮಿತ್ತ ಅಧ್ಯಕ್ಷರು;

(ii) ಪ್ರಾಧ್ಯಾಪಕರಾಗಿದ್ದರೆ, ಸಂಬಂಧಪಟ್ಟ ವಿಭಾಗೀಯ ಪರಿಷತ್ತಿನ ಅಧ್ಯಕ್ಷರು ಮತ್ತು ಅವರು ಪ್ರಾಧ್ಯಾಪಕರಾಗಿರದಿದ್ದರೆ ಅದೇ ವಿಭಾಗದಿಂದ ಒಬ್ಬ ಪ್ರಾಧ್ಯಾಪಕರು ಮತ್ತು ಪ್ರಾಧ್ಯಾಪಕರು ಇರದಿದ್ದರೆ ಸರ್ಕಾರದ ಶಿಫಾರಸ್ಸಿನ ಮೇಲೆ ಕುಲಾಧಿಪತಿಯವರು ನಾಮನಿರ್ದೇಶನ ಮಾಡಿದಂಥ ರಾಜ್ಯದಲ್ಲಿನ ಯಾವುದೇ ಇತರ ವಿಶ್ವವಿದ್ಯಾಲಯದಿಂದ ಅದೇ ವಿಭಾಗದ ಒಬ್ಬ ಪ್ರಾಧ್ಯಾಪಕರು:

ಪರಂತು, ರಾಜ್ಯದಲ್ಲಿನ ಯಾವುದೇ ವಿಶ್ವವಿದ್ಯಾಲಯಗಳಲ್ಲಿ ಅಂಥ ಪ್ರಾಧ್ಯಾಪಕರು ಲಭ್ಯವಿರದಿದ್ದರೆ, ರಾಜ್ಯದೊಳಗಿನ ಕೇಂದ್ರೀಯ ಸಂಸ್ಥೆಯ ಅಥವಾ ಯಾವುದೇ ಇತರ ರಾಜ್ಯದ ವಿಶ್ವವಿದ್ಯಾಲಯದ ಸಂಬಂಧಪಟ್ಟ ವಿಭಾಗದಲ್ಲಿನ ಅಂಥ ಪ್ರಾಧ್ಯಾಪಕರೊಬ್ಬರನ್ನು ನಾಮನಿರ್ದೇಶಿಸತಕ್ಕದ್ದು.

(iii) ರಾಜ್ಯದ ಯಾವುದೇ ವಿಶ್ವವಿದ್ಯಾಲಯದಲ್ಲಿ ಅಥವಾ ಸರ್ಕಾರದಿಂದ ಮನ್ನಣೆ ಪಡೆದ ಯಾವುದೇ ಇತರ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ವ್ಯಕ್ತಿಗಳ ಪೈಕಿಯಿಂದ ಸರ್ಕಾರದ ಶಿಫಾರಸ್ಸಿನೊಂದಿಗೆ ಕುಲಾಧಿಪತಿಯವರು ನಾಮ ನಿರ್ದೇಶನ ಮಾಡಿರುವ ನಾಲ್ವರು ತಜ್ಞರು. ಇವರಲ್ಲಿ ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಕ್ಕೆ ಸೇರಿದ ಒಬ್ಬ ವ್ಯಕ್ತಿ ಮತ್ತು ಇತರೆ ಹಿಂದುಳಿದ ವರ್ಗಕ್ಕೆ ಸೇರಿದ ಮತ್ತೊಬ್ಬ ವ್ಯಕ್ತಿ ಇರತಕ್ಕದ್ದು:

ಪರಂತು, ರಾಜ್ಯದಲ್ಲಿನ ಯಾವುವೇ ವಿಶ್ವವಿದ್ಯಾಲಯಗಳಲ್ಲಿ ಅಂಥ ವ್ಯಕ್ತಿಗಳು ಲಭ್ಯವಿರದಿದ್ದರೆ ಭಾರತದಲ್ಲಿನ ಯಾವುದೇ ಇತರೆ ವಿಶ್ವವಿದ್ಯಾಲಯಗಳಲ್ಲಿ ಸೇವೆ ಸಲ್ಲಿಸುವ ಅಂಥ ವ್ಯಕ್ತಿಗಳನ್ನು ನಾಮನಿರ್ದೇಶನ ಮಾಡತಕ್ಕದ್ದು.

(ಬಿ) ಉಪನ್ಯಾಸಕರ ಹುದ್ದೆಯ ಆಯ್ಕೆಗಾಗಿ, ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಪತಿ–ಪದನಿಮಿತ್ತ ಅಧ್ಯಕ್ಷರು;

(ii) ವಿಶ್ವವಿದ್ಯಾಲಯ ಅನುದಾನ ಆಯೋಗದ ಪಟ್ಟಿಯಿಂದ ಕುಲಾಧಿಪತಿಯವರು ನಾಮನಿರ್ದೇಶಿಸುವಂಥ ಮೂವರು ತಜ್ಞರು, ಇವರಲ್ಲಿ ಅನುಸೂಚಿತ ಜಾತಿಗಳು ಅಥವಾ ಅನುಸೂಚಿತ ಪಂಗಡಗಳಿಗೆ ಸೇರಿದ ಒಬ್ಬ ವ್ಯಕ್ತಿ ಮತ್ತು ಇತರ ಹಿಂದುಳಿದ ವರ್ಗಕ್ಕೆ ಸೇರಿದ ಮತ್ತೊಬ್ಬ ವ್ಯಕ್ತಿ ಇರತಕ್ಕದ್ದು;

(iii) ಪ್ರಾಧ್ಯಾಪಕರಾಗಿದ್ದರೆ, ಸಂಬಂಧಪಟ್ಟ ವಿಭಾಗೀಯ ಪರಿಷತ್ತಿನ ಅಧ್ಯಕ್ಷರು ಮತ್ತು ಅವರು ಪ್ರಾಧ್ಯಾಪಕರಾಗಿಲ್ಲದಿದ್ದರೆ, ಅದೇ ವಿಭಾಗದ ಒಬ್ಬ ಪ್ರಾಧ್ಯಾಪಕರು, ವಿಭಾಗದಲ್ಲಿ ಪ್ರಾಧ್ಯಾಪಕರು ಇರದಿದ್ದರೆ ರಾಜ್ಯದಲ್ಲಿ ಯಾವುದೇ ಇತರೆ ವಿಶ್ವವಿದ್ಯಾಲಯದ ಅದೇ ವಿಭಾಗದ, ಸರ್ಕಾರದಿಂದ ನಾಮನಿರ್ದೇಶಿಸಲಾಗುವ ಒಬ್ಬರು ಪ್ರಾಧ್ಯಾಪಕರು ಮತ್ತು ರಾಜ್ಯದಲ್ಲಿ ಯಾವುದೇ ವಿಶ್ವವಿದ್ಯಾಲಯದಲ್ಲಿ ಅಂಥ ಪ್ರಾಧ್ಯಾಪಕರು ಲಭ್ಯವಿರದಿದ್ದರೆ, ರಾಜ್ಯದೊಳಗಿನ ಕೇಂದ್ರೀಯ ಸಂಸ್ಥೆಯ ಅಥವಾ ಯಾವುದೇ ರಾಜ್ಯದ ವಿಶ್ವವಿದ್ಯಾಲಯದ ಸಂಬಂಧಪಟ್ಟ ಇಲಾಖೆಯ, ಸರ್ಕಾರವು ನಾಮನಿರ್ದೇಶಿಸುವ ಒಬ್ಬರು ಪ್ರಾಧ್ಯಾಪಕರು.

(ಸಿ) ಗ್ರಂಥಪಾಲ ಹುದ್ದೆಯ ಆಯ್ಕೆಗಾಗಿ ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಪತಿ–ಪದನಿಮಿತ್ತ ಅಧ್ಯಕ್ಷರು;

(ii) ವಿಶ್ವವಿದ್ಯಾಲಯ ಅನುದಾನ ಆಯೋಗದ ಪಟ್ಟಿಯಿಂದ ಕುಲಾಧಿಪತಿಯವರು ನಾಮನಿರ್ದೇಶಿಸುವ ಮೂವರು ಗ್ರಂಥಾಲಯ ತಜ್ಞರು, ಇವರಲ್ಲಿ ಅನುಸೂಚಿತ ಜಾತಿಗಳು ಅಥವಾ ಅನುಸೂಚಿತ ಪಂಗಡಗಳಿಗೆ ಸೇರಿದ ಒಬ್ಬ ವ್ಯಕ್ತಿ ಮತ್ತು ಇತರ ಹಿಂದುಳಿದ ವರ್ಗಕ್ಕೆ ಸೇರಿದ ಮತ್ತೊಬ್ಬ ವ್ಯಕ್ತಿ ಇರತಕ್ಕದ್ದು.

(iii) ರಾಜ್ಯದ ಯಾವುದೇ ಇತರೆ ವಿಶ್ವವಿದ್ಯಾಲಯದ ಗ್ರಂಥಾಲಯದ ಗ್ರಂಥಪಾಲರ ಪೈಕಿಯಿಂದ ಸರ್ಕಾರವು ನಾಮನಿರ್ದೇಶಿಸುವ ಒಬ್ಬ ಗ್ರಂಥಪಾಲರು ಮತ್ತು ರಾಜ್ಯದಲ್ಲಿ ಯಾವುದೇ ವಿಶ್ವವಿದ್ಯಾಲಯದಲ್ಲಿ ಅಂಥ ಗ್ರಂಥಪಾಲರು ಲಭ್ಯವಿರದಿದ್ದರೆ, ರಾಜ್ಯದೊಳಗಿನ ಕೇಂದ್ರೀಯ ಸಂಸ್ಥೆಯ ಒಬ್ಬರು ಗ್ರಂಥಪಾಲರು.

(3) ಕುಲಸಚಿವರು ಮಂಡಳಿಯ ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು.

(4) ಆಯ್ಕೆಯ ಮೂಲಕ ಭರ್ತಿ ಮಾಡಬೇಕಾದ ಪ್ರಾಧ್ಯಾಪಕ, ಸಹ ಪ್ರಾಧ್ಯಾಪಕ, ಸಹಾಯಕ ಪ್ರಾಧ್ಯಾಪಕರು ಅಥವಾ ಉಪನ್ಯಾಸಕರ ಪ್ರತಿಯೊಂದು ಹುದ್ದೆಯನ್ನು, ಕನಿಷ್ಠ ಮತ್ತು ಇತರ ಅರ್ಹತೆಗಳು, ಅನುಭವ, ವೇತನ ಶ್ರೇಣಿ, ಹುದ್ದೆಗಳ ಸಂಖ್ಯೆ, ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ ಮತ್ತು ಖಾಲಿ ಸ್ಥಾನಗಳನ್ನು ಅನುಸೂಚಿತ ಜಾತಿಗಳು, ಅನುಸೂಚಿತ ಪಂಗಡಗಳು ಮತ್ತು ಇತರ ಹಿಂದುಳಿದ ವರ್ಗಗಳಿಗೆ ಸಂಬಂಧಿಸಿದಂತೆ ವರ್ಗೀಕರಣ, ಇವುಗಳೊಂದಿಗೆ ವ್ಯಾಪಕವಾಗಿ ಜಾಹಿರಾತು ಮಾಡತಕ್ಕದ್ದು;

ಪರಂತು, ಈಗಾಗಲೇ ವಿಶ್ವವಿದ್ಯಾಲಯದ ಸೇವೆಗಳಲ್ಲಿರುವ, ಕನಿಷ್ಠ ವಿದ್ಯಾರ್ಹತೆ ಹೊಂದಿರುವ ಮತ್ತು ಜಾಹಿರಾತುಗಳಲ್ಲಿ ನಿರ್ದಿಷ್ಟಪಡಿಸಿರುವ ಇತರ ಅಗತ್ಯತೆಗಳನ್ನು ಪೂರೈಸುವಂಥ ಅಧ್ಯಾಪಕರನ್ನು ಕೂಡ ಸಂದರ್ಶನಕ್ಕೆ ಕರೆಯತಕ್ಕದ್ದು ಮತ್ತು ಅವರ ಪ್ರಕರಣಗಳನ್ನು ಇತರ ಅರ್ಜಿದಾರರಿಗೆ ಸಮಾನವಾಗಿ ಪರಿಗಣಿಸತಕ್ಕದ್ದು.

(5) ಮಂಡಳಿಯ ಸಭೆಗೆ ಕೋರಂ ನಾಲ್ಕು ಆಗಿರತಕ್ಕದ್ದು. ಅವರ ಪೈಕಿ ಪ್ರಾಧ್ಯಾಪಕರ, ಸಹ ಪ್ರಾಧ್ಯಾಪಕರ, ಸಹಾಯಕ ಪ್ರಾಧ್ಯಾಪಕರ ಮತ್ತು ಗ್ರಂಥಪಾಲರ ಹುದ್ದೆಗಳ ಆಯ್ಕೆಯ ಸಂದರ್ಭದಲ್ಲಿ ಕನಿಷ್ಠ ಪಕ್ಷ ಇಬ್ಬರು ತಜ್ಞರಿರತಕ್ಕದ್ದು ಮತ್ತು ಇತರ ಹುದ್ದೆಗಳ ಆಯ್ಕೆಯ ಸಂದರ್ಭದಲ್ಲಿ ಕನಿಷ್ಠ ಪಕ್ಷ ಒಬ್ಬ ತಜ್ಞರು ಇರತಕ್ಕದ್ದು.

(6) ಮಂಡಳಿಯು ಸಂದರ್ಶನವನ್ನು ನಡೆಸತಕ್ಕದ್ದು ಮತ್ತು ಜಾಹೀರಾತು ಮಾಡಿದ ಅರ್ಹತೆಗಳನ್ನು ಹೊಂದಿರುವುದರ ಮತ್ತು ಸಂದರ್ಶನದಲ್ಲಿ ನಿರ್ವಹಣೆಯ ಅನುಸಾರವಾಗಿ ಪ್ರತಿಯೊಬ್ಬ ಅಭ್ಯರ್ಥಿಯ ಅರ್ಹತೆಯನ್ನು ನಿರ್ಣಯಿಸತಕ್ಕದ್ದು. ಸಂದರ್ಶನದ ರೀತಿಯು ಪರಿನಿಯಮಗಳು ನಿಯಮಿಸಿದಂತೆ ಇರತಕ್ಕದ್ದು.

(7) ಮಂಡಳಿಯು ಆಯ್ಕೆಯಾದ ವ್ಯಕ್ತಿಗಳ ಪಟ್ಟಿಯನ್ನು ತಯಾರಿಸತಕ್ಕದ್ದು ಮತ್ತು ಅವರು ಅರ್ಹತಾದಾಯಕ ಪರೀಕ್ಷೆಗಳಲ್ಲಿ ಪಡೆದ ಅಂಕಗಳ ಶೇಕಡವಾರಿನ, ಹೆಚ್ಚಿನ ವಿದ್ಯಾರ್ಹತೆಗಾಗಿ ನೀಡಲಾದ ವೈಟೇಜಿನ ಮತ್ತು ಸಂದರ್ಶನದಲ್ಲಿ ಗಳಿಸಿದ ಅಂಕಗಳ ಆಧಾರದ ಮೇಲೆ ನಿರ್ಧರಿಸಲಾದಂತೆ ಆದ್ಯತಾನುಕ್ರಮದಲ್ಲಿ ನಮೂದಿಸತಕ್ಕದ್ದು. ಆಯ್ಕೆ ಪಟ್ಟಿಯನ್ನು ಸಿಂಡಿಕೇಟಿಗೆ ಕಳುಹಿಸತಕ್ಕದ್ದು. ನಂತರ ಸಿಂಡಿಕೇಟ್ ಅದನ್ನು ಪರಿಗಣಿಸಿ ಅನುಮೋದಿಸತಕ್ಕದ್ದು. ಅನಂತರ ಸಿಂಡಿಕೇಟ್ ಆಯ್ಕೆ ಪಟ್ಟಿಯನ್ನು ಕಾರ್ಯಾಚರಣೆಗೊಳಿಸುವ ಮೂಲಕ ಆಯ್ಕೆಯಾದ ಮತ್ತು ಆದ್ಯತಾನುಕ್ರಮದಲ್ಲಿ ನಮೂದಿಸಲಾದ ಅಭ್ಯರ್ಥಿಗಳ ಪೈಕಿಯಿಂದ ನೇಮಕಾತಿಗಳನ್ನು ಮಾಡತಕ್ಕದ್ದು:

ಪರಂತು, ಸಿಂಡಿಕೇಟ್ ಮತ್ತು ನೇಮಕಾತಿ ಮಂಡಳಿಯ ನಡುವೆ ಭಿನ್ನಾಭಿಪ್ರಾಯ ಉಂಟಾದ ಸಂದರ್ಭದಲ್ಲಿ ಮತ್ತು ಆಯ್ಕೆ ಪಟ್ಟಿಯು ಅಧ್ಯಾದೇಶದ ಅಥವಾ ಪರಿನಿಯಮಗಳ ಉಪಬಂಧಗಳಿಗೆ ಅಥವಾ ವಿಶ್ವವಿದ್ಯಾಲಯದ ಅನುದಾನ ಆಯೋಗ ಅಥವಾ ಅದೇ ತರಹದ ಶಾಸನಬದ್ಧ ಪ್ರಾಧಿಕಾರಗಳು ಕಾಲಕಾಲಕ್ಕೆ ಹೊರಡಿಸಿದ ಮಾರ್ಗದರ್ಶಿ ಸೂತ್ರಗಳಿಗೆ ಅನುಗುಣವಾಗಿಲ್ಲವೆಂದು ಅದು ಅಭಿಪ್ರಾಯಪಟ್ಟರೆ, ಅದು ಹೊಸ ಸಂದರ್ಶನ ಮತ್ತು ಆಯ್ಕೆಗಾಗಿ ವಿಷಯವನ್ನು ಮಂಡಳಿಗಳಿಗೆ ವಾಪಸು ಕಳುಹಿಸತಕ್ಕದ್ದು.

(8) (7)ನೇ ಉಪಪ್ರಕರಣದ ಅಡಿಯಲ್ಲಿ ಪಟ್ಟಿಯನ್ನು ತಯಾರಿಸುವಾಗ ನೇಮಕಾತಿ ಮಂಡಳಿಯು, ಅನುಸೂಚಿತ ಜಾತಿಗಳು, ಅನುಸೂಚಿತ ಪಂಗಡಗಳು ಮತ್ತು ಇತರ ಹಿಂದುಳಿದ ವರ್ಗಗಳಿಗೆ ಸೇರಿದ ವ್ಯಕ್ತಿಗಳ ನೇಮಕಾತಿ ಮತ್ತು ಹುದ್ದೆಗಳ ಮೀಸಲಾತಿಗೆ ಸಂಬಂಧಿಸಿದಂತೆ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿದ ಆದೇಶಗಳನ್ನು ಪಾಲಿಸತಕ್ಕದ್ದು.

(9) ವಿಶ್ವವಿದ್ಯಾಲಯದಲ್ಲಿ ಯಾವುದೇ ಹೊಸ ವಿಷಯವನ್ನು ಪ್ರಾರಂಭಿಸಿದಾಗ ಅಥವಾ ಯಾವುದೇ ಹೊಸ ವಿಭಾಗವನ್ನು ತೆರೆದಾಗಲೆಲ್ಲ ಅಂಥ ವಿಷಯದಲ್ಲಿ ಅಥವಾ ಸಂದರ್ಭಾನುಸಾರ ಅಂಥ ವಿಭಾಗದಲ್ಲಿ ಪ್ರಾಧ್ಯಾಪಕರು, ಸಹ ಪ್ರಾಧ್ಯಾಪಕರು, ಸಹಾಯಕ ಪ್ರಾಧ್ಯಾಪಕರ ಮತ್ತು ಉಪನ್ಯಾಸಕರ ನೇಮಕವನ್ನು ಈ ಪ್ರಕರಣದ ಉಪಬಂಧಗಳ ಅಡಿಯಲ್ಲಿ ಮಾಡತಕ್ಕದ್ದು.

(10) ಹಿಂದಿನ ಉಪಪ್ರಕರಣಗಳಲ್ಲಿ ಏನೇ ಇದ್ದರೂ, ಸಿಂಡಿಕೇಟು, ಕುಲಪತಿಯವರ ಶಿಫಾರಸ್ಸಿನ ಮೇಲೆ ಜಾನಪದ ಕ್ಷೇತ್ರದಲ್ಲಿ ಉನ್ನತ ಶೈಕ್ಷಣಿಕ ಅರ್ಹತೆ ಮತ್ತು ವೃತ್ತಿ ಸಾಧನೆಗಳನ್ನು ಪಡೆದಿರುವ ವ್ಯಕ್ತಿಯನ್ನು ಅಥವಾ ಯಾವ ತಾಂತ್ರಿಕ ಅರ್ಹತೆಗಳನ್ನೂ ಗಳಿಸಿಲ್ಲದ ಆದರೆ ವೃತ್ತಿ ನೈಪುಣ್ಯತೆಯನ್ನು ಸಾಧಿಸಿರುವ ಜಾನಪದ ಪ್ರತಿಭಾಶಾಲಿಯನ್ನು ವಿಶ್ವವಿದ್ಯಾಲಯದಲ್ಲಿ ಸಂದರ್ಶಕ ಪ್ರಾಧ್ಯಾಪಕ ಹುದ್ದೆಯನ್ನು ಸ್ವೀಕರಿಸಲು ಪರಸ್ಪರ ಒಪ್ಪಬಹುದಾದ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಆಹ್ವಾನಿಸಲು ಸಕ್ಷಮವಾಗಿರತಕ್ಕದ್ದು. ಒಂದು ನಿಗದಿತ ಅವಧಿಯಲ್ಲಿ ಅಂಥ ಸಂದರ್ಶಕ ಪ್ರಾಧ್ಯಾಪಕರುಗಳು ಹದಿನಾಲ್ಕಕ್ಕಿಂತ ಹೆಚ್ಚಿಗೆ ಇರತಕ್ಕದ್ದಲ್ಲ.

**53. ಬಡ್ತಿ ಯೋಜನೆಗಳಿಗನುಸಾರ ನೇಮಕಾತಿ.–** (1) 52ನೇ ಪ್ರಕರಣದಲ್ಲಿ ಏನೇ ಇದ್ದರೂ ಆದರೆ, ಸಂವಿಧಾನದ ಅನುಚ್ಛೇದ 16(4) ಮತ್ತು 16(4ಎ) ಅಡಿಯಲ್ಲಿ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳಿಗೆ ಸೇರಿದ ವ್ಯಕ್ತಿಗಳ ನೇಮಕ ಮತ್ತು ಹುದ್ದೆಗಳಿಗೆ ಸಂಬಂಧಿಸಿದ ಮೀಸಲಾತಿ ಬಗ್ಗೆ ಸರ್ಕಾರವು ಕಾಲಕಾಲಕ್ಕೆ ಹೊರಡಿಸಲಾದ ನಿಯಮಗಳು ಮತ್ತು ಆದೇಶಗಳಿಗೆ ಒಳಪಟ್ಟು, ವಿಶ್ವವಿದ್ಯಾಲಯದ ಪ್ರಾಧ್ಯಾಪಕರು, ಸಹ ಪ್ರಾಧ್ಯಾಪಕರು ಮತ್ತು ಉಪನ್ಯಾಸಕರು ಹಾಗೂ ಘಟಕ ಕಾಲೇಜುಗಳಲ್ಲಿ ಪ್ರಾಂಶುಪಾಲರು, ಸಹಾಯಕ ಪ್ರಾಧ್ಯಾಪಕರು ಮತ್ತು ಉಪನ್ಯಾಸಕರ ಹುದ್ದೆಗೆ

ನೇಮಕವನ್ನು ಸಿಂಡಿಕೇಟು, ವಿಶ್ವವಿದ್ಯಾಲಯ ಅನುದಾನ ಆಯೋಗ ರೂಪಿಸಿದ ಯೋಜನೆಗಳನ್ನು ಅಳವಡಿಸಿಕೊಳ್ಳಲಾಗಿರುವ ಪರಿನಿಯಮಗಳ ಮೂಲಕ ನಿಯಮಿಸಲಾದಂತೆ ಬಡ್ತಿಗಳಿಗೆ ಸಂಬಂಧಿಸಿದ ಯೋಜನೆಯ ಪ್ರಕಾರ ಮಾಡತಕ್ಕದ್ದು.

(2) ಆಯ್ಕೆಯು ಪರಿನಿಯಮಗಳ ಮೂಲಕ ನಿಯಮಿಸಿದಂತೆ ಮತ್ತು ವಿಶ್ವವಿದ್ಯಾಲಯ ಅನುದಾನ ಆಯೋಗದ ವಿಧಿ ವಿಧಾನ ಮತ್ತು ಮಾರ್ಗದರ್ಶಿ ಸೂತ್ರಗಳಿಗೊಳಪಟ್ಟು ಇರತಕ್ಕದ್ದು.

**54. ತಾತ್ಕಾಲಿಕ ನೇಮಕಾತಿ.**–(1) 52, 53 ಮತ್ತು 55ನೇ ಪ್ರಕರಣಗಳಲ್ಲಿ ಏನೇ ಇದ್ದರೂ, ಕುಲಾಧಿಪತಿಯವರು ತಾತ್ಕಾಲಿಕವಾಗಿಯಾಗಲೀ ಅಥವಾ 52, 53 ಮತ್ತು 55ನೇ ಪ್ರಕರಣಗಳಿಗೆ ಅನುಸಾರವಾಗಿ ನೇಮಕಾತಿಗಳನ್ನು ಮಾಡಲಾಗದಂಥ ಉಪನ್ಯಾಸಕರ ಹುದ್ದೆಗಳಿಗೆ ಮತ್ತು ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಬೋಧಕೇತರ ಸಿಬ್ಬಂದಿ ಹುದ್ದೆಗಳಿಗೆ, ವಿಳಂಬವಿಲ್ಲದೆ, ಒಂದು ವರ್ಷಕ್ಕೆ ಮೀರದ ಅವಧಿಗೆ ತಾತ್ಕಾಲಿಕ ನೇಮಕಾತಿಗಳನ್ನು ಮಾಡಬಹುದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ನೇಮಕಾತಿಗಳನ್ನು ಮಂಜೂರಾದ ಹುದ್ದೆಗಳಿಗೆ ಮಾತ್ರ ಮತ್ತು ಪರಿನಿಯಮಗಳ ಮೂಲಕ ನಿಯಮಿಸಲಾದ ವಿಧಾನದಲ್ಲಿ ಮಾಡತಕ್ಕದ್ದು.

**55. ಆಡಳಿತ, ಲಿಪಿಕ ಮತ್ತು ಇತರೆ ಸಿಬ್ಬಂದಿಯ ನೇಮಕ.**– (1) ವಿಶ್ವವಿದ್ಯಾಲಯದಲ್ಲಿ ಆಡಳಿತ, ಲಿಪಿಕ ಮತ್ತು ಇತರ ಹುದ್ದೆಗಳ ನೇಮಕಾತಿಗೆ ಅಭ್ಯರ್ಥಿಗಳ ಆಯ್ಕೆಗೆ ಒಂದು ನೇಮಕಾತಿ ಮಂಡಳಿಯನ್ನು ರಚಿಸತಕ್ಕದ್ದು.

(2) ಮಂಡಳಿಯು,–

(i) ಕುಲಪತಿ–ಪದನಿಮಿತ್ತ ಅಧ್ಯಕ್ಷರು;

(ii) ಶೈಕ್ಷಣಿಕ ಪರಿಷತ್ತಿನಿಂದ ನಾಮನಿರ್ದೇಶಿತರಾದ ಒಬ್ಬ ಸದಸ್ಯರು;

(iii) ಸಿಂಡಿಕೇಟಿನಿಂದ ನಾಮನಿರ್ದೇಶಿತರಾದ ಒಬ್ಬ ಸದಸ್ಯರು;

(iv) ಮೂವರು ಆಡಳಿತ ತಜ್ಞರು;

(v) ಕುಲಪತಿಯವರು ನಾಮನಿರ್ದೇಶಿಸಿದ ಒಬ್ಬ ತಜ್ಞರು;

(vi) ಕುಲಸಚಿವರು,

–ಇವರುಗಳನ್ನು ಒಳಗೊಂಡಿರತಕ್ಕದ್ದು.

(3) ಮಂಡಳಿಯು ನೇರನೇಮಕಾತಿಯ ಖಾಲಿ ಸ್ಥಾನಗಳ ನೇಮಕಾತಿಗೆ ಅಭ್ಯರ್ಥಿಗಳ ಪಟ್ಟಿಯನ್ನು ಅಭ್ಯರ್ಥಿಗಳು ಅರ್ಹತಾ ಪರೀಕ್ಷೆಯಲ್ಲಿ ಪಡೆದ ಶೇಕಡಾವಾರು ಅಂಕಗಳು ಮತ್ತು ಸಂದರ್ಶನದಲ್ಲಿ ನೀಡಲಾದ ಅಂಕಗಳ ಆಧಾರದ ಮೇಲೆ ನಿರ್ಧರಿಸಿದಂತೆ ಆಧರಿಸಿ, ಆಯ್ಕೆಗಾಗಿ ಮೆರಿಟ್ ಕ್ರಮದಲ್ಲಿ ಹೆಸರುಗಳನ್ನು ಜೋಡಿಸಿ ಅಭ್ಯರ್ಥಿಗಳ ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು.

(4) (3)ನೇ ಉಪಪ್ರಕರಣದ ಅಡಿಯಲ್ಲಿ ಆಯ್ಕೆ ಪಟ್ಟಿಯನ್ನು ಸಿದ್ಧಪಡಿಸುವಾಗ, ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳು ಮತ್ತು ಇತರ ಹಿಂದುಳಿದ ವರ್ಗಗಳಿಗೆ ಸೇರಿದ ವ್ಯಕ್ತಿಗಳಿಗೆ ನೇಮಕಾತಿಗಳು ಅಥವಾ ಹುದ್ದೆಗಳನ್ನು ಮೀಸಲಿಡುವ ವಿಷಯದಲ್ಲಿ ಕಾಲಕಾಲಕ್ಕೆ ಸರ್ಕಾರವು, ಸಂವಿಧಾನದ 16(4)ನೇ ಅನುಚ್ಛೇದದಡಿಯಲ್ಲಿ ಹೊರಡಿಸಬಹುದಾದಂಥ ನಿಯಮಗಳನ್ನು ಅಥವಾ ಆದೇಶಗಳನ್ನು ಮಂಡಳಿಯು ಅನುಸರಿಸತಕ್ಕದ್ದು.

(5) ಸಿಂಡಿಕೇಟು ಹೆಸರುಗಳನ್ನು ಮೆರಿಟ್ ಕ್ರಮದಲ್ಲಿ ಮಂಡಳಿಯು ಸಿದ್ಧಪಡಿಸಿದ ಆಯ್ಕೆ ಪಟ್ಟಿಯನ್ನು ಅನುಸರಿಸುವ ಮೂಲಕ, ಎಲ್ಲಾ ನೇಮಕಾತಿಗಳನ್ನು ಮಾಡತಕ್ಕದ್ದು. ಮಂಡಳಿ ಮತ್ತು ಸಿಂಡಿಕೇಟ್‌ನ ನಡುವೆ ಯಾವುದೇ ಭಿನ್ನಾಭಿಪ್ರಾಯ ಉಂಟಾದರೆ ಆ ವಿಷಯವನ್ನು ಸರ್ಕಾರದ ಶಿಕ್ಷಣ ಇಲಾಖೆಯ ಮೂಲಕ ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು. ಅಂಥ ಉಲ್ಲೇಖಿಸಿದ ಮೇಲೆ ಕುಲಾಧಿಪತಿಯವರ ತೀರ್ಮಾನವೇ ಅಂತಿಮವಾಗಿರತಕ್ಕದ್ದು.

(6) ಸಭೆಯ ಕೋರಂ ನಾಲ್ಕು ಆಗಿರತಕ್ಕದ್ದು.

## ಅಧ್ಯಾಯ – IX

### ಕೆಲವು ಸಂಸ್ಥೆಗಳಿಗೆ ಮನ್ನಣೆ

**56. ಕೆಲವು ಸಂಸ್ಥೆಗಳಿಗೆ ಮನ್ನಣೆ.**– (1) ಸಂಶೋಧನೆ ಅಥವಾ ನಿರ್ದಿಷ್ಟಪಡಿಸಿದ ಅಧ್ಯಯನಗಳನ್ನು ಅಥವಾ ಪರಿಣಿತ ಅಧ್ಯಯನಗಳನ್ನು ನಡೆಸುವ ಸಂಸ್ಥೆಯನ್ನು ಹೊರತುಪಡಿಸಿ, ವಿಶ್ವವಿದ್ಯಾಲಯ ಪ್ರದೇಶದ ಒಳಗೆ ಅಥವಾ ಹೊರಗೆ ಇರುವ ಜಾನಪದ ಸಂಗ್ರಹಣೆ, ಸಂರಕ್ಷಣೆ ಹಾಗೂ ಸಂವರ್ಧನ ಕಾರ್ಯದಲ್ಲಿ ತೊಡಗಿಕೊಂಡಿರುವ ಯಾವುದೇ ಸಂಸ್ಥೆಯನ್ನು ಪರಿನಿಯಮಗಳ ಮೂಲಕ ನಿಯಮಿಸಬಹುದಾದಂತೆ ಅಂಥ ಉದ್ದೇಶಕ್ಕಾಗಿ ಮತ್ತು ಅಂಥ ರೀತಿಯಲ್ಲಿ ಹಾಗೂ ಅಂಥ ಷರತ್ತುಗಳಿಗೆ ಒಳಪಟ್ಟು, ಸಿಂಡಿಕೇಟು, ಮನ್ನಣೆ ಪಡೆದ ಸಂಸ್ಥೆಯೆಂದು ಮನ್ನಣೆ ನೀಡಬಹುದು.

(2) ಪರಿನಿಯಮಗಳ ಮೂಲಕ ನಿಯಮಿಸಬಹುದಾದ ಅಂಥ ರೀತಿಯಲ್ಲಿ ಮತ್ತು ಅಂಥ ಕಾರಣಗಳಿಗಾಗಿ, ಅಂಥ ಮನ್ನಣೆಯನ್ನು ಪೂರ್ಣವಾಗಿಯಾಗಲಿ ಅಥವಾ ಭಾಗಶಃವಾಗಿಯಾಗಲಿ ಹಿಂತೆಗೆದುಕೊಳ್ಳಬಹುದು ಅಥವಾ ಮಾರ್ಪಾಟುಮಾಡಬಹುದು.

**57. ಸಂಸ್ಥೆಗಳ ಪರಿವೀಕ್ಷಣೆ.**– (1) ಖಾಯಂ ಆಗಿ ಮನ್ನಣೆ ಪಡೆದ ಸಂಸ್ಥೆಯೂ ಸೇರಿಕೊಂಡಂತೆ ಮನ್ನಣೆ ಪಡೆದ ಪ್ರತಿಯೊಂದು ಸಂಸ್ಥೆ, ಸಿಂಡಿಕೇಟು, ಶೈಕ್ಷಣಿಕ ಪರಿಷತ್ತಿನೊಡನೆ ಸಮಾಲೋಚನೆ ನಡೆಸಿದ ತರುವಾಯ, ಆ ಸಂಸ್ಥೆಯ ದಕ್ಷತೆಯನ್ನು ಅಥವಾ ಸಂಸ್ಥೆಯು ಸಾಧಿಸಿದ ಶೈಕ್ಷಣಿಕ ಗುಣಮಟ್ಟವನ್ನು ತೀರ್ಮಾನಿಸುವುದಕ್ಕೆ, ಅಗತ್ಯವಾಗಬಹುದಾದಂಥ ವರದಿಗಳನ್ನು, ವಿವರ ಪಟ್ಟಿಕೆಗಳನ್ನು ಮತ್ತು ಇತರ ಮಾಹಿತಿಯನ್ನು ಕುಲಸಚಿವರಿಗೆ ಒದಗಿಸತಕ್ಕದ್ದು.

(2) ಸಿಂಡಿಕೇಟು ಅಂಥ ಪ್ರತಿಯೊಂದು ಸಂಸ್ಥೆಯನ್ನು, ಈ ಉದ್ದೇಶಕ್ಕಾಗಿ ರಚಿತವಾದ ಸಮಿತಿಯು ಕಾಲಕಾಲಕ್ಕೆ ಪರಿವೀಕ್ಷಣೆ ನಡೆಸುವಂತೆ ಮಾಡತಕ್ಕದ್ದು.

(3) ಸಿಂಡಿಕೇಟು ಹಾಗೆ ಪರಿವೀಕ್ಷಿಸಲಾದ ಯಾವುದೇ ಸಂಸ್ಥೆಯನ್ನು, ನಿರ್ದಿಷ್ಟಪಡಿಸಿದ ಅವಧಿಯೊಳಗೆ ಯಾವುದೇ ವಿಷಯಗಳಿಗೆ ಸಂಬಂಧಿಸಿದಂತೆ ತನಗೆ ಅವಶ್ಯವೆಂದು ಕಂಡು ಬರಬಹುದಾದಂಥ ಕ್ರಮ ಕೈಗೊಳ್ಳಲು ಕೋರಬಹುದು.

(4) ಶೈಕ್ಷಣಿಕ, ಆಡಳಿತಾತ್ಮಕ ಹಾಗೂ ಅದಕ್ಕೆ ಪೂರಕವಾದ ಎಲ್ಲಾ ವಿಷಯಗಳ ಸಂಬಂಧವಾಗಿ ವಿಶ್ವವಿದ್ಯಾಲಯವು ಕಾಲಕಾಲಕ್ಕೆ ಹೊರಡಿಸುವ ನಿರ್ದೇಶನಗಳನ್ನು ಪ್ರತಿಯೊಂದು ಸಂಸ್ಥೆಯು ಪಾಲಿಸತಕ್ಕದ್ದು.

## ಅಧ್ಯಾಯ – X

### ಪಟ್ಟಿಗೆ ಸೇರಿಸುವಿಕೆ ಮತ್ತು ಪದವಿಗಳು

**58. ವಿದ್ಯಾರ್ಥಿಗಳ ಪ್ರವೇಶಕ್ಕಾಗಿ ಅರ್ಹತೆ.–** ಯಾವೊಬ್ಬ ವಿದ್ಯಾರ್ಥಿಯು, ಕಾಲಕಾಲಕ್ಕೆ ಪರಿನಿಯಮಗಳಿಂದ ನಿಯಮಿಸಬಹುದಾದ ಅಂಥ ಅರ್ಹತೆಗಳನ್ನು ಜಾನಪದ ಕ್ಷೇತ್ರದಲ್ಲಿ ಅವರು ಹೊಂದಿದ್ದ ಹೊರತು, ಪದವಿ ಅಥವಾ ಡಿಪ್ಲೊಮಾ ಅಧ್ಯಯನ ಕ್ರಮಗಳ ಪ್ರವೇಶಕ್ಕೆ ಅರ್ಹರಾಗಿರತಕ್ಕದ್ದಲ್ಲ.

**59. ಗೌರವ ಪದವಿಗಳು.–** (1) ಸಿಂಡಿಕೇಟ್‌ನ ಮೂರನೇ ಎರಡರಷ್ಟಕ್ಕೆ ಕಡಿಮೆ ಇಲ್ಲದ ಸದಸ್ಯರು, ಯಾವೊಬ್ಬ ವ್ಯಕ್ತಿಗೆ, ಅವರ ಶ್ರೇಷ್ಠ ಸಾಧನೆ ಮತ್ತು ಸ್ಥಾನಮಾನದ ಕಾರಣದಿಂದಾಗಿ ಅವರ ಅಭಿಪ್ರಾಯದಲ್ಲಿ ಅಂಥ ಗೌರವ ಪದವಿ ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಯನ್ನು ಸ್ವೀಕರಿಸಲು ಯೋಗ್ಯ ಮತ್ತು ಸರಿಯಾದ ವ್ಯಕ್ತಿ ಎಂಬ ಆಧಾರದ ಮೇಲೆ ಗೌರವ ಪದವಿ ಅಥವಾ ಶೈಕ್ಷಣಿಕ ಪ್ರಶಸ್ತಿಯನ್ನು ಪ್ರದಾನ ಮಾಡಬೇಕೆಂದು ಶಿಫಾರಸ್ಸು ಮಾಡಿದರೆ, ಸಿಂಡಿಕೇಟು, ಸಂಬಂಧಪಟ್ಟ ವ್ಯಕ್ತಿಗೆ ಅದನ್ನು ಪ್ರದಾನ ಮಾಡಲು ಕುಲಾಧಿಪತಿಯವರ ಅನುಮೋದನೆಗಾಗಿ ಶಿಫಾರಸ್ಸು ಮಾಡಬಹುದು.

(2) ಗೌರವ ಪದವಿಯನ್ನು ಅಥವಾ ಪ್ರಶಸ್ತಿಯನ್ನು ವಿಶೇಷ ಸಂದರ್ಭಗಳಲ್ಲಿ ಮಾತ್ರ ಪ್ರದಾನ ಮಾಡಬಹುದು. ಅದನ್ನು ಕೇವಲ ಒಂದು ವಾಡಿಕೆಯ ಕ್ರಮವಾಗಿ ಪ್ರದಾನ ಮಾಡತಕ್ಕದ್ದಲ್ಲ. ಮೌಖಿಕ ಜಾನಪದ, ಜನಪದ ಕಲೆಗಳ ಅಧ್ಯಯನ, ಜಾನಪದ ಸಂಗೀತ ಅಥವಾ ಜಾನಪದ ಅಧ್ಯಯನದ ವ್ಯಾಸಂಗ ವಿಭಾಗಗಳಿಗೆ ವಹಿಸಿದ ಯಾವುದೇ ಇತರೆ ವಿಷಯದಲ್ಲಿನ, ಮುನ್ನಡೆಗಾಗಿ ಗಣನೀಯ ಕೊಡುಗೆ ನೀಡಿದ ಅಥವಾ ಶಿಕ್ಷಣದ ಧ್ಯೇಯಗಳಿಗಾಗಿ ವಿಶಿಷ್ಟ ಸೇವೆ ಸಲ್ಲಿಸಿದ ವ್ಯಕ್ತಿಗಳನ್ನು ಅಂಥ ಗೌರವ ಪದವಿಗಳ ನೀಡಿಕೆಯ ಉದ್ದೇಶಕ್ಕಾಗಿ ಗುರುತಿಸತಕ್ಕದ್ದು.

**60. ಪದವಿ ಅಥವಾ ಡಿಪ್ಲೊಮಾಗಳನ್ನು ಹಿಂತೆಗೆದುಕೊಳ್ಳುವುದು.–** (1) ಯಾವೊಬ್ಬ ವ್ಯಕ್ತಿಯು, ಒಂದು ಪದವಿಯನ್ನು, ಡಿಪ್ಲೊಮಾವನ್ನು ಅಥವಾ ಸರ್ಟಿಫಿಕೇಟನ್ನು ಮೋಸದಿಂದ ಅಥವಾ ಸುಳ್ಳು ಜಾತಿ ಪ್ರಮಾಣಪತ್ರದ ಮೂಲಕ ಪ್ರವೇಶವನ್ನು ಪಡೆದುಕೊಂಡಿದ್ದಾನೆಂದು ಕಂಡುಬಂದರೆ, ಸಿಂಡಿಕೇಟಿನ ಒಟ್ಟು ಸದಸ್ಯರ ಬಹುಮತದಿಂದ ಮತ್ತು ಆ ಸಭೆಯಲ್ಲಿ ಹಾಜರಿದ್ದು ಮತ್ತು ಚಲಾಯಿಸುವ ಮೂರನೆಯ ಎರಡು ಅಂಶಕ್ಕಿಂತ ಕಡಿಮೆಯಿಲ್ಲದ ಸದಸ್ಯರ ಬಹುಮತದಿಂದ ಅಂಗೀಕೃತವಾದ ನಿರ್ಣಯದ ಮೂಲಕ ಶೈಕ್ಷಣಿಕ ಪರಿಷತ್ತಿನ ಶಿಫಾರಸ್ಸಿನ ಮೇಲೆ ಸಿಂಡಿಕೇಟ್, ಅಂಥ ಯಾವೊಬ್ಬ ವ್ಯಕ್ತಿಗೆ ಪ್ರದಾನ ಮಾಡಲಾಗಿದ್ದ ಅಥವಾ ಕೊಡಲಾಗಿದ್ದ ಅಂಥ ಯಾವುದೇ ಪ್ರಶಸ್ತಿ, ಪದವಿ, ಡಿಪ್ಲೊಮಾ ಅಥವಾ ವಿಶೇಷಾಧಿಕಾರವನ್ನು ಹಿಂತೆಗೆದುಕೊಳ್ಳಬಹುದು.

(2) ಈ ಪ್ರಕರಣದ ಅಡಿಯಲ್ಲಿ ಯಾವೊಬ್ಬ ವ್ಯಕ್ತಿಯ ವಿರುದ್ಧ, ಕೈಗೊಳ್ಳಬೇಕೆಂದು ಪ್ರಸ್ತಾವಿಸಿದ ಕ್ರಮದ ವಿರುದ್ಧ ಕಾರಣ ತೋರಿಸಲು ಅವರಿಗೆ ಅವಕಾಶವನ್ನು ಕೊಟ್ಟ ಹೊರತು, ಯಾವುದೇ ಕ್ರಮ ಕೈಗೊಳ್ಳತಕ್ಕದ್ದಲ್ಲ.

(3) ಸಿಂಡಿಕೇಟು ಅಂಗೀಕರಿಸಿದ ನಿರ್ಣಯದ ಪ್ರತಿಯೊಂದನ್ನು ಸಂಬಂಧಪಟ್ಟ ವ್ಯಕ್ತಿಗೆ ಕೂಡಲೇ ಕಳುಹಿಸತಕ್ಕದ್ದು.

(4) ಸಿಂಡಿಕೇಟು ತೆಗೆದುಕೊಂಡ ತೀರ್ಮಾನದಿಂದ ಬಾಧಿತರಾದ ಯಾವೊಬ್ಬ ವ್ಯಕ್ತಿಯು, ಅಂಥ ನಿರ್ಣಯವನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ, ಕುಲಾಧಿಪತಿಗೆ ಮೇಲ್ಮನವಿಯನ್ನು ಸಲ್ಲಿಸಬಹುದು.

(5) ಅಂಥ ಮೇಲ್ಮನವಿಯ ಮೇಲೆ ಕುಲಾಧಿಪತಿಯವರ ತೀರ್ಮಾನವು ಅಂತಿಮವಾಗಿರತಕ್ಕದ್ದು.

## ಅಧ್ಯಾಯ – XI

### ಸಂಕೀರ್ಣ ಮತ್ತು ತಾತ್ಕಾಲಿಕ ಉಪಬಂಧಗಳು

**61. ಶಿಸ್ತು.–** (1) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಲ್ಲಿ ಶಿಸ್ತನ್ನು ಕಾಯ್ದುಕೊಂಡು ಬರುವ ಅಂತಿಮ ಪ್ರಾಧಿಕಾರಿಯು ಕುಲಪತಿಯಾಗಿರತಕ್ಕದ್ದು. ಈ ಸಂಬಂಧದಲ್ಲಿ ಅವರ ನಿರ್ದೇಶನಗಳನ್ನು ವಿಶ್ವವಿದ್ಯಾಲಯದಿಂದ ಮನ್ನಣೆ ಪಡೆದ ಸಂಸ್ಥೆಗಳ ಮತ್ತು ವಿದ್ಯಾರ್ಥಿನಿಲಯಗಳ ಮುಖ್ಯಸ್ಥರು ಕಾರ್ಯಗತಗೊಳಿಸತಕ್ಕದ್ದು.

(2) (1)ನೇ ಉಪ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ,–

(i) ಪರೀಕ್ಷೆಗಳಿಂದ ಒಬ್ಬ ವಿದ್ಯಾರ್ಥಿಯನ್ನು ಡಿಬಾರ್ ಮಾಡುವ ಶಿಕ್ಷೆಯನ್ನು ಕುಲಪತಿಯ ವರದಿಯ ಮೇಲೆ ಸಿಂಡಿಕೇಟು ಪರಿಗಣಿಸತಕ್ಕದ್ದು ಮತ್ತು ವಿಧಿಸತಕ್ಕದ್ದು; ಮತ್ತು

(ii) ಸಂಸ್ಥೆಯಿಂದ ಅಥವಾ ವಿದ್ಯಾರ್ಥಿನಿಲಯದಿಂದ ಹೊರಹಾಕುವ ಶಿಕ್ಷೆಯನ್ನು ಸಂಬಂಧಪಟ್ಟ ಸಂಸ್ಥೆಯ ಅಥವಾ ವಿದ್ಯಾರ್ಥಿನಿಲಯದ ಮುಖ್ಯಸ್ಥರು ವಿಧಿಸತಕ್ಕದ್ದು.

(3) ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ನಿಕಾಯದ ಯಾವುದೇ ಗೊತ್ತುವಳಿಯನ್ನು ಯಾವೊಬ್ಬ ಸದಸ್ಯರಿಗೆ ನೋಟೀಸನ್ನು ಜಾರಿ ಮಾಡುವಲ್ಲಿಯ ಯಾವುದೇ ಅಕ್ರಮತೆಯ ಕಾರಣದಿಂದಾಗಿ ಅದು ಅಸಿಂಧುವೆಂದು ಭಾವಿಸತಕ್ಕದ್ದಲ್ಲ:

ಪರಂತು, ಅಂಥ ಪ್ರಾಧಿಕಾರದ ಅಥವಾ ನಿಕಾಯದ ನಡವಳಿಗಳು, ಅಂಥ ಅಕ್ರಮತೆಯಿಂದ ಪ್ರತಿಕೂಲವಾಗಿ, ಬಾಧಕವಾಗತಕ್ಕದ್ದಲ್ಲ.

**62. ಈ ಅಧ್ಯಾದೇಶವು ಇತರ ಅಧಿನಿಯಮಗಳ ಮೇಲೆ ಹೆಚ್ಚಿನ ಪ್ರಭಾರವುಳ್ಳದ್ದಾಗಿರುವುದು.**–ಈ ಅಧ್ಯಾದೇಶವು ಮತ್ತು ಅದರ ಅಡಿಯಲ್ಲಿ ರಚಿಸಿದ ಪರಿನಿಯಮಗಳು ಅಥವಾ ವಿನಿಯಮಗಳು ಅಥವಾ ನಿಯಮಗಳು ಅಥವಾ ಆರ್ಡಿನೆನ್ಸ್‌ಗಳು, ವಿಶ್ವವಿದ್ಯಾಲಯದ ಪ್ರದೇಶದಲ್ಲಿರುವ ಯಾವುದೇ ಸಂಸ್ಥೆಯ ಸಂಬಂಧದಲ್ಲಿ, ಭಾರತ ಸಂವಿಧಾನದ ಏಳನೇ ಅನುಸೂಚಿಯ IIನೇ ಪಟ್ಟಿಯಲ್ಲಿ ನಮೂದು ಮಾಡಿದ ವಿಷಯಗಳ ಸಂಬಂಧದಲ್ಲಿ ಯಾವುದೇ ಇತರ ಅಧಿನಿಯಮದಲ್ಲಿ ಇದಕ್ಕೆ ಅಸಂಗತವಾದುದೇನೇ ಒಳಗೊಂಡಿದ್ದರೂ ಪರಿಣಾಮವುಳ್ಳವುಗಳಾಗಿರತಕ್ಕದ್ದು.

**63. ಸದ್ಭಾವನೆಯಿಂದ ಕೈಗೊಂಡ ಕ್ರಮದ ರಕ್ಷಣೆ.**– ಈ ಅಧ್ಯಾದೇಶದ ಅಥವಾ ಅದರ ಅಡಿಯಲ್ಲಿ ರಚಿಸಿದ ಪರಿನಿಯಮಗಳು, ಆರ್ಡಿನೆನ್ಸ್‌ಗಳು, ವಿನಿಮಯಗಳು ಅಥವಾ ನಿಯಮಗಳಿಗೆ ಅನುಸಾರವಾಗಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ವಿಶ್ವವಿದ್ಯಾಲಯದ ಅಥವಾ ಅದರ ಪ್ರಾಧಿಕಾರಗಳ, ನಿಕಾಯಗಳ ಅಥವಾ ಅಧಿಕಾರಿಗಳ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆ ಇರತಕ್ಕದ್ದಲ್ಲ ಮತ್ತು ಅದರಿಂದ ಯಾವುದೇ ಹಾನಿಗಳನ್ನು ಕ್ಲೇಮು ಮಾಡತಕ್ಕದ್ದಲ್ಲ.

**64. ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಮತ್ತು ನಿಕಾಯಗಳ ವ್ಯವಹರಣೆಗಳು ಖಾಲಿಸ್ಥಾನಗಳು ಇರುವುದರಿಂದಾಗಿ ಅಮಾನ್ಯವಾಗತಕ್ಕದ್ದಲ್ಲ.**– ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಇತರ ನಿಕಾಯದ ಯಾವುದೇ ಕೃತ್ಯ ಅಥವಾ ವ್ಯವಹರಣೆಯು, ಯಾವುದೇ ಖಾಲಿಸ್ಥಾನ ಇದೆ ಎಂಬ ಅಥವಾ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಇತರ ನಿಕಾಯದ ರಚನೆಯಲ್ಲಿಯ ಅಥವಾ ಸದಸ್ಯರ ನೇಮಕಾತಿಯಲ್ಲಿಯ ಯಾವುದೇ ದೋಷ ಅಥವಾ ಅಕ್ರಮತೆಯ ಅಥವಾ ಪ್ರಕರಣದ ಗುಣಗಳಿಗೆ ಬಾಧಕವಾಗದ, ಅಂಥ ಕೃತ್ಯ ಅಥವಾ ವ್ಯವಹರಣೆಯಲ್ಲಿನ ಯಾವುದೇ ದೋಷ ಅಥವಾ ಅಕ್ರಮತೆಯ ಕಾರಣ ಮಾತ್ರದಿಂದಲೇ ಅಮಾನ್ಯವಾಗತಕ್ಕದ್ದಲ್ಲ.

**65. ವಿಶ್ವವಿದ್ಯಾಲಯದ ಸದಸ್ಯತ್ವದಿಂದ ತೆಗೆದುಹಾಕುವುದು.**–(1) ಸಿಂಡಿಕೇಟ್, ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಸದಸ್ಯತ್ವದಿಂದ ಯಾವೊಬ್ಬ ವ್ಯಕ್ತಿಯನ್ನು, ಅಂಥ ವ್ಯಕ್ತಿಯು, ಸಿಂಡಿಕೇಟ್‌ನ ಅಭಿಪ್ರಾಯದಲ್ಲಿ ನೈತಿಕ ಅಧಃಪತನವನ್ನು ಒಳಗೊಳ್ಳುವ ಒಂದು ಅಪರಾಧಕ್ಕಾಗಿ ಕ್ರಿಮಿನಲ್ ನ್ಯಾಯಾಲಯದಿಂದ ಸಿದ್ಧದೋಷಿಯಾಗಿದ್ದರೆ ಅಥವಾ ಗುರುತರ ದುರ್ವರ್ತನೆಯ ದೋಷಿಯಾಗಿದ್ದರೆ, ಸಿಂಡಿಕೇಟ್‌ನ ಒಟ್ಟು ಸದಸ್ಯರ ಬಹುಮತದಿಂದ ಮತ್ತು ಸಭೆಯಲ್ಲಿ ಹಾಜರಿದ್ದು ಮತ ನೀಡುವ ಸಿಂಡಿಕೇಟ್‌ನ ಮೂರನೇ ಎರಡರಷ್ಟು ಸಂಖ್ಯೆಯ ಸದಸ್ಯರಿಗಿಂತ ಕಡಿಮೆಯಿಲ್ಲದ ಬಹುಮತದಿಂದ ಒಂದು ಗೊತ್ತುವಳಿಯನ್ನು ಅಂಗೀಕರಿಸಿ ಆ ಬಗ್ಗೆ ಲಿಖಿತದಲ್ಲಿ ಆದೇಶವನ್ನು ಹೊರಡಿಸುವ ಮೂಲಕ ತೆಗೆದುಹಾಕಬಹುದು ಮತ್ತು ಅದೇ ಕಾರಣಕ್ಕಾಗಿ ಸಿಂಡಿಕೇಟ್, ವಿಶ್ವವಿದ್ಯಾಲಯವು ಆ ವ್ಯಕ್ತಿಗೆ ಪ್ರದಾನ ಮಾಡಿರುವ ಅಥವಾ ನೀಡಿರುವ ಯಾವುದೇ ಪದವಿ ಅಥವಾ ಡಿಪ್ಲೊಮಾವನ್ನು ಹಿಂತೆಗೆದುಕೊಳ್ಳಬಹುದು.

(2) ಸಿಂಡಿಕೇಟ್, ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಸದಸ್ಯತ್ವದಿಂದ ಯಾವೊಬ್ಬ ವ್ಯಕ್ತಿಯನ್ನು, ಅವರು ಅಸ್ವಸ್ಥಚಿತ್ತದವರಾದರೆ ಅಥವಾ ದಿವಾಳಿಯೆಂದು ನ್ಯಾಯ ನಿರ್ಣಯಿಸಬೇಕೆಂದು ಅರ್ಜಿ ಸಲ್ಲಿಸಿದ್ದರೆ ಅಥವಾ ಹಾಗೆಂದು ನ್ಯಾಯ ನಿರ್ಣೀತರಾಗಿದ್ದರೆ, ಆ ಬಗ್ಗೆ ಹೊರಡಿಸಲಾದ ಲಿಖಿತ ಆದೇಶದ ಮೂಲಕ ತೆಗೆದುಹಾಕಬಹುದು.

(3) ಈ ಪ್ರಕರಣದ ಅಡಿಯಲ್ಲಿ ಯಾವೊಬ್ಬ ವ್ಯಕ್ತಿಯ ವಿರುದ್ಧ ತೆಗೆದುಕೊಳ್ಳಲು ಉದ್ದೇಶಿಸಿದ ಕ್ರಮದ ವಿರುದ್ಧ ಕಾರಣ ತೋರಿಸಲು ಅವರಿಗೆ ಒಂದು ಯುಕ್ತ ಅವಕಾಶವನ್ನು ನೀಡದ ಹೊರತು, ಅವರ ಮೇಲೆ ಕ್ರಮವನ್ನು ಕೈಗೊಳ್ಳತಕ್ಕದ್ದಲ್ಲ.

(4) (1)ನೇ ಉಪ–ಪ್ರಕರಣದ ಅಥವಾ ಸಂದರ್ಭಾನುಸಾರ (2)ನೇ ಉಪ–ಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ಆದೇಶದ ಒಂದು ಪ್ರತಿಯನ್ನು ಅದನ್ನು ಹಾಗೆ ಹೊರಡಿಸಿದ ತರುವಾಯ ಸಾಧ್ಯವಾದಷ್ಟು ಬೇಗನೆ, ನಿಯಮಿಸಲಾದ ರೀತಿಯಲ್ಲಿ ಸಂಬಂಧಪಟ್ಟ ವ್ಯಕ್ತಿಗೆ ಕಳುಹಿಸತಕ್ಕದ್ದು.

**66. ವಿಶ್ವವಿದ್ಯಾಲಯದ ಮನ್ನಣೆ ಪಡೆದ ಸಂಸ್ಥೆಗಳ ಸಂಬಂಧ.**– ವಿಶ್ವವಿದ್ಯಾಲಯದ ಮನ್ನಣೆ ಪಡೆದ ಸಂಸ್ಥೆಗಳ ಸಂಬಂಧವು, ಈ ಸಂಬಂಧದಲ್ಲಿ ರಚಿಸಲಾಗುವ ಪರಿನಿಯಮಗಳಿಗೆ ಒಳಪಟ್ಟಿರತಕ್ಕದ್ದು ಮತ್ತು ಅಂಥ ಪರಿನಿಯಮಗಳು, ವಿಶೇಷವಾಗಿ, ವಿಶ್ವವಿದ್ಯಾಲಯದಿಂದ ಮಾನ್ಯತೆಯನ್ನು ಪಡೆದ ಸಂಸ್ಥೆಗಳ ಸಂಬಂಧದಲ್ಲಿ ಗ್ರಂಥಾಲಯಗಳು, ಪ್ರಯೋಗ ಶಾಲೆಗಳು ಮತ್ತು ಬೋಧನೆ ಮತ್ತು ಸಂಶೋಧನೆಗಾಗಿ ಇತರ ಸಲಕರಣೆಗಳ ಸಂಬಂಧದಲ್ಲಿ ಅಂಥ ಸಂಸ್ಥೆಗಳು ಒದಗಿಸಿದ ಸೌಲಭ್ಯಗಳ ಬಗ್ಗೆ ವಹಿಸಿದ ವೆಚ್ಚದ ಸಂಬಂಧದಲ್ಲಿ ಸಮನ್ವಯ ಮತ್ತು ನಿಯಂತ್ರಣ ಮಾಡಲು ಅಧಿಕಾರಗಳನ್ನು ಚಲಾಯಿಸತಕ್ಕದ್ದು.

**67. ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಮತ್ತು ನಿಕಾಯಗಳ ರಚನೆಗೆ ಸಂಬಂಧಪಟ್ಟ ವಿವಾದಗಳು.**– ಯಾವೊಬ್ಬ ವ್ಯಕ್ತಿಯು, ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ವಿಶ್ವವಿದ್ಯಾಲಯದ ಇತರ ನಿಕಾಯದ ಸದಸ್ಯರಾಗಿ ಯಥೋಚಿತವಾಗಿ ನಾಮನಿರ್ದೇಶಿತ ವಾಗಿದ್ದಾರೆಯೇ ಅಥವಾ ಸದಸ್ಯರಾಗಿರಲು ಹಕ್ಕುಳ್ಳವರಾಗಿದ್ದಾರೆಯೇ ಎಂಬ ಬಗ್ಗೆ ಯಾವುದೇ ಪ್ರಶ್ನೆ ಉದ್ಭವಿಸಿದರೆ, ಪ್ರಶ್ನೆಯನ್ನು ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು ಮತ್ತು ಅದರ ಬಗ್ಗೆ ಅವರ ತೀರ್ಮಾನವು ಅಂತಿಮವಾಗಿರತಕ್ಕದ್ದು.

**68. ಸಮಿತಿಗಳ ರಚನೆ.**– ವಿಶ್ವವಿದ್ಯಾಲಯದ ಎಲ್ಲ ಪ್ರಾಧಿಕಾರಗಳು, ಸಮಿತಿಗಳನ್ನು ರಚಿಸಲು ಅಥವಾ ಪುನರ್‌ರಚಿಸಲು ಮತ್ತು ಅವು ಉಚಿತವೆಂದು ಭಾವಿಸುವ ತಮ್ಮ ಅಂಥ ಅಧಿಕಾರಗಳನ್ನು ಅವುಗಳಿಗೆ ಪ್ರತ್ಯಾಯೋಜಿಸಲು ಅಧಿಕಾರ ಹೊಂದಿರತಕ್ಕದ್ದು. ಅಂಥ ಸಮಿತಿಗಳು, ಅನ್ಯಥಾ ಉಪಬಂಧಿಸಿರುವುದನ್ನುಳಿದು, ಸಂಬಂಧಪಟ್ಟ ಪ್ರಾಧಿಕಾರದ ಸದಸ್ಯರನ್ನು ಮತ್ತು ಪ್ರಾಧಿಕಾರವು ಪ್ರತಿಯೊಂದು ಸಂದರ್ಭದಲ್ಲಿ ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ಇತರ ವ್ಯಕ್ತಿಗಳು ಯಾರಾದರೂ ಇದ್ದರೆ, ಅವರನ್ನು ಒಳಗೊಂಡಿರತಕ್ಕದ್ದು.

**69. ಮಾಹಿತಿಗಳನ್ನು ಪಡೆಯಲು ಅಧಿಕಾರ.**–ಈ ಅಧ್ಯಾದೇಶದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಸರ್ಕಾರವು ವಿಶ್ವವಿದ್ಯಾಲಯದ ವ್ಯವಹಾರಗಳಿಗೆ ಸಂಬಂಧಪಟ್ಟ ಯಾವುದೇ ವಿಷಯದ ಬಗ್ಗೆ ಯಾವುದೇ ಮಾಹಿತಿಯನ್ನು ವಿಶ್ವವಿದ್ಯಾಲಯದಿಂದ ಲಿಖಿತ ಆದೇಶದ ಮೂಲಕ ತರಿಸಿಕೊಳ್ಳಬಹುದು ಮತ್ತು ವಿಶ್ವವಿದ್ಯಾಲಯವು, ಅಂಥ ಮಾಹಿತಿಯು ಲಭ್ಯವಿದ್ದಲ್ಲಿ ಯುಕ್ತ ಅವಧಿಯೊಳಗೆ ಅಂಥ ಮಾಹಿತಿಯನ್ನು ಸರ್ಕಾರಕ್ಕೆ ಒದಗಿಸತಕ್ಕದ್ದು:

ಪರಂತು, ವಿಶ್ವವಿದ್ಯಾಲಯವು ರಹಸ್ಯವೆಂದು ಪರಿಗಣಿಸುವ ಮಾಹಿತಿಯ ಸಂದರ್ಭದಲ್ಲಿ, ವಿಶ್ವವಿದ್ಯಾಲಯವು ಅದನ್ನು ಸಹ ಕುಲಾಧಿಪತಿಗಳ ಮುಂದೆ ಇಡಬಹುದು.

**70. ಪ್ರಥಮ ಕುಲಪತಿಯವರ ನೇಮಕಾತಿ.**–13ನೇ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಈ ಅಧ್ಯಾದೇಶವು ಜಾರಿಯಲ್ಲಿ ಬಂದ ದಿನಾಂಕದಿಂದ ಆರು ತಿಂಗಳೊಳಗಾಗಿ ಸರ್ಕಾರವು, ಪ್ರಥಮ ಕುಲಪತಿಯವರನ್ನು ನಾಲ್ಕು ವರ್ಷಗಳಿಗೆ ಮೀರದ ಅವಧಿಗೆ ಮತ್ತು ತಾನು ಉಚಿತವೆಂದು ಭಾವಿಸುವ ಅಂಥ ಇತರ ಷರತ್ತುಗಳ ಮೇಲೆ ನೇಮಕ ಮಾಡತಕ್ಕದ್ದು:

ಪರಂತು, ಪ್ರಥಮ ಕುಲಪತಿಯವರಾಗಿ ನೇಮಿತರಾದ ವ್ಯಕ್ತಿಯು, ತಮ್ಮ ಪದಾವಧಿಯಲ್ಲಿ ಅರವತ್ತೇಳು ವರ್ಷಗಳ ವಯಸ್ಸನ್ನು ಪೂರ್ಣಗೊಳಿಸಿದ್ದರೆ ತಮ್ಮ ಪದದಿಂದ ನಿವೃತ್ತರಾಗತಕ್ಕದ್ದು.

**71. ಪ್ರಥಮ ಕುಲಪತಿಯವರ ತಾತ್ಕಾಲಿಕ ಅಧಿಕಾರಗಳು.**– (1) ಸರ್ಕಾರವು ಅಧಿಸೂಚನೆ ಮೂಲಕ ನಿರ್ದೇಶಿಸಬಹುದಾದಂತೆ ಅಧಿಸೂಚಿತ ದಿನಾಂಕದಿಂದ ಆರು ತಿಂಗಳೊಳಗಾಗಿ ಅಥವಾ ಒಂದು ವರ್ಷಕ್ಕೆ ಮೀರದ ಅಂಥ ದೀರ್ಘ ಅವಧಿಯೊಳಗಾಗಿ ವಿಶ್ವವಿದ್ಯಾಲಯದ ಶೈಕ್ಷಣಿಕ ಪರಿಷತ್ತು, ಸಿಂಡಿಕೇಟ್ ಮತ್ತು ಅಂಥ ಇತರ ಪ್ರಾಧಿಕಾರಗಳನ್ನು ರಚಿಸುವುದಕ್ಕಾಗಿ ವ್ಯವಸ್ಥೆಗಳನ್ನು ಮಾಡುವುದು ಪ್ರಥಮ ಕುಲಪತಿಯವರ ಕರ್ತವ್ಯವಾಗಿರತಕ್ಕದ್ದು.

(2) ಪ್ರಥಮ ಕುಲಪತಿಯವರು ಸರ್ಕಾರದೊಂದಿಗೆ ಸಮಾಲೋಚಿಸಿ ವಿಶ್ವವಿದ್ಯಾಲಯದ ಕಾರ್ಯನಿರ್ವಹಣೆಗೆ ಅಗತ್ಯವಿರಬಹುದಾದ ಅಂಥ ನಿಯಮಗಳನ್ನು ರಚಿಸತಕ್ಕದ್ದು.

(3) (1)ನೇ ಉಪ–ಪ್ರಕರಣದ ಅಡಿಯಲ್ಲಿ ರಚಿತವಾದ ಪ್ರಾಧಿಕಾರಗಳು, ಸರ್ಕಾರವು ಅಧಿಸೂಚನೆಯ ಮೂಲಕ ಈ ಬಗ್ಗೆ ನಿರ್ದಿಷ್ಟಪಡಿಸಬಹುದಾದ ಅಂಥ ದಿನಾಂಕದಂದು ಪ್ರಕಾರ್ಯಗಳನ್ನು ಚಲಾಯಿಸಲು ಪ್ರಾರಂಭ ಮಾಡತಕ್ಕದ್ದು.

(4) ಅವಶ್ಯವಿರಬಹುದಾದ ಅಂಥ ಪರಿನಿಯಮಗಳ ಕರಡನ್ನು ಸಿದ್ಧಪಡಿಸಿ, ಅನುಮೋದನೆಗಾಗಿ ಸಿಂಡಿಕೇಟ್‌ಗೆ ಒಪ್ಪಿಸುವುದು ಪ್ರಥಮ ಕುಲಪತಿಯವರ ಕರ್ತವ್ಯವಾಗಿರತಕ್ಕದ್ದು. ಅಂಥ ಪರಿನಿಯಮಗಳು ರಚಿತವಾದಾಗ ಅವುಗಳನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸತಕ್ಕದ್ದು.

(5) ಈ ಅಧ್ಯಾದೇಶ ಮತ್ತು ಪರಿನಿಯಮಗಳಲ್ಲಿ ಏನೇ ಒಳಗೊಂಡಿದ್ದರೂ ಮತ್ತು ಒಂದು ಪ್ರಾಧಿಕಾರವು ಯಥೋಚಿತವಾಗಿ ರಚಿತವಾಗುವ ಅಂಥ ಕಾಲದವರೆಗೂ ಪ್ರಥಮ ಕುಲಪತಿಯವರು ಅಧ್ಯಾದೇಶ ಮತ್ತು ಪರಿನಿಯಮಗಳ ಅಡಿಯಲ್ಲಿ, ಅಂಥ ಪ್ರಾಧಿಕಾರದ ಯಾವುವೇ ಅಧಿಕಾರಗಳನ್ನು ಚಲಾಯಿಸಲು ಮತ್ತು ಕರ್ತವ್ಯಗಳನ್ನು ನಿರ್ವಹಿಸಲು ತಾತ್ಕಾಲಿಕವಾಗಿ ಯಾವೊಬ್ಬ ಅಧಿಕಾರಿಯನ್ನು ನೇಮಿಸಬಹುದು ಅಥವಾ ಯಾವುದೇ ಸಮಿತಿಯನ್ನು ರಚಿಸಬಹುದು.

**72. ಕುಲಪತಿ ಮತ್ತು ಇತರ ಅಧಿಕಾರಿಗಳು ಮುಂತಾದವರು ಸಾರ್ವಜನಿಕ ನೌಕರರಾಗಿರಬೇಕು.**– ಕುಲಪತಿಯವರು, ಕುಲ ಸಚಿವರು, ಹಣಕಾಸು ಅಧಿಕಾರಿ ಮತ್ತು ವಿಶ್ವವಿದ್ಯಾಲಯದ ಇತರ ಉದ್ಯೋಗಿಗಳು, ಈ ಅಧ್ಯಾದೇಶದ ಯಾವುದೇ ಉಪಬಂಧಗಳ ಅನುಸರಣೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವಾಗ ಅಥವಾ ಕಾರ್ಯ ನಿರ್ವಹಿಸುತ್ತಿರುವರೆಂದು ತಾತ್ಪರ್ಯವಾದಾಗ ಭಾರತ ದಂಡ ಸಂಹಿತೆಯ (1860ರ ಕೇಂದ್ರ ಅಧಿನಿಯಮ XLV) 21ನೇ ಪ್ರಕರಣದ ಅರ್ಥ ವ್ಯಾಪ್ತಿಯೊಳಗೆ ಸಾರ್ವಜನಿಕ ನೌಕರರಾಗಿರುವರೆಂದು ಭಾವಿಸತಕ್ಕದ್ದು.

**73. ನೇಮಕಾತಿಯ ವಿಶೇಷ ವಿಧಾನ.**–(1) ಸಿಂಡಿಕೇಟ್ ತಾನು ಉಚಿತವೆಂದು ಭಾವಿಸಬಹುದಾದ ಅಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಉನ್ನತ ವಿದ್ಯಾರ್ಹತೆ ಮತ್ತು ವೃತ್ತಿ ಪರಿಣತಿಯುಳ್ಳ ಒಬ್ಬ ವ್ಯಕ್ತಿಯನ್ನು ವಿಶ್ವವಿದ್ಯಾಲಯದ ಬೋಧಕ ಅಥವಾ ಸಂಶೋಧನಾಧಿಕಾರಿ ಹುದ್ದೆಯನ್ನು ಸ್ವೀಕರಿಸಲು ಆಹ್ವಾನಿಸಬಹುದು ಮತ್ತು ಹಾಗೆ ಮಾಡಲು ಆ ವ್ಯಕ್ತಿಯು ಒಪ್ಪಿಕೊಂಡ ಮೇಲೆ ಕುಲಾಧಿಪತಿಯವರ ಅನುಮೋದನೆಗೆ ಒಳಪಟ್ಟು ಆ ಹುದ್ದೆಗೆ ಅವರನ್ನು ನೇಮಿಸಬಹುದು.

(2) ಸಿಂಡಿಕೇಟ್, ನಿಯಮಿಸಲಾದ ರೀತಿಗನುಸಾರವಾಗಿ ಸಂಯುಕ್ತ ಯೋಜನೆಯನ್ನು ಕೈಗೊಳ್ಳುವುದಕ್ಕಾಗಿ ಇತರ ಯಾವುದೇ ವಿಶ್ವವಿದ್ಯಾಲಯ ಅಥವಾ ಸಂಸ್ಥೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಬೋಧಕರು ಅಥವಾ ಶೈಕ್ಷಣಿಕ ಸಿಬ್ಬಂದಿಯ ಇತರ ಯಾವೊಬ್ಬ ಸದಸ್ಯರನ್ನು ನೇಮಕ ಮಾಡಬಹುದು.

**74. ತಾತ್ಕಾಲಿಕ ಉಪಬಂಧಗಳು.**– ಈ ಅಧ್ಯಾದೇಶದಲ್ಲಿ ಏನೇ ಒಳಗೊಂಡಿದ್ದರೂ, ಕುಲಪತಿಯವರು ಕುಲಾಧಿಪತಿಯವರ ಪೂರ್ವಾನುಮೋದನೆಯೊಂದಿಗೆ, ಈ ಅಧ್ಯಾದೇಶದ ಉಪಬಂಧಗಳನ್ನು ಕಾರ್ಯಗತಗೊಳಿಸುವ ಉದ್ದೇಶಕ್ಕಾಗಿ, ವಿಶ್ವವಿದ್ಯಾಲಯದ ಎಲ್ಲಾ ಅಥವಾ ಯಾವುದೇ ಪ್ರಕಾರ್ಯಗಳನ್ನು ನಿರ್ವಹಿಸಬಹುದು ಮತ್ತು ಆ ಉದ್ದೇಶಕ್ಕಾಗಿ ಈ ಅಧ್ಯಾದೇಶದ ಮೂಲಕ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರವು ಚಲಾಯಿಸಬೇಕಾದ ಅಥವಾ ನಿರ್ವಹಿಸಬೇಕಾದ ಯಾವುವೇ ಅಧಿಕಾರಗಳನ್ನು ಅಥವಾ ಕರ್ತವ್ಯಗಳನ್ನು ಈ ಅಧ್ಯಾದೇಶದಲ್ಲಿ ಉಪಬಂಧಿಸಿದಂತೆ ಅಂಥ ಪ್ರಾಧಿಕಾರವು ಅಸ್ತಿತ್ವಕ್ಕೆ ಬರುವವರೆಗೆ ಚಲಾಯಿಸಬಹುದು ಅಥವಾ ನೆರವೇರಿಸಬಹುದು.

**75. ತೊಂದರೆಗಳನ್ನು ನಿವಾರಿಸಲು ಅಧಿಕಾರ.– (1)** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಪ್ರಥಮ ರಚನೆ ಅಥವಾ ಪುನರ್ ರಚನೆಗೆ ಅಥವಾ ಈ ಅಧ್ಯಾದೇಶದ ಉಪಬಂಧಗಳನ್ನು ಜಾರಿಗೊಳಿಸುವುದಕ್ಕೆ ಸಂಬಂಧಿಸಿದಂತೆ ಯಾವುದೇ ತೊಂದರೆ ಉದ್ಭವಿಸಿದರೆ, ಸರ್ಕಾರವು ಅಂಥ ತೊಂದರೆಯನ್ನು ನಿವಾರಿಸುವುದಕ್ಕಾಗಿ ಅವಶ್ಯಕವೆಂದು ಅಥವಾ ಸೂಕ್ತವೆಂದು ತನಗೆ ಕಂಡು ಬರಬಹುದಾದಂತೆ ಈ ಅಧ್ಯಾದೇಶದ ಉಪಬಂಧಗಳಿಗೆ ಅಸಂಗತವಾಗಿರದ ಅಂಥ ಉಪಬಂಧಗಳನ್ನು ಅಧಿಸೂಚನೆ ಮೂಲಕ ರಚಿಸಬಹುದು:

ಪರಂತು, ಈ ಅಧ್ಯಾದೇಶದ ಆರಂಭದ ದಿನಾಂಕದಿಂದ ಐದು ವರ್ಷಗಳ ಅವಧಿಯು ಮುಕ್ತಾಯವಾದ ತರುವಾಯ ಅಂಥ ಯಾವುದೇ ಅಧಿಸೂಚನೆಯನ್ನು ಹೊರಡಿಸತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ಅಧಿಸೂಚನೆಯನ್ನು ಅದನ್ನು ಹೊರಡಿಸಿದ ತರುವಾಯ ಆದಷ್ಟು ಬೇಗನೇ ರಾಜ್ಯದ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ, ಒಂದು ಅಧಿವೇಶನ ಅಥವಾ ಎರಡು ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಮೂವತ್ತು ದಿನಗಳ ಒಟ್ಟು ಅವಧಿಯಲ್ಲಿ ಅದು ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಿದ ಅಧಿವೇಶನ ಅಥವಾ ನಿಕಟೋತ್ತರ ಅಧಿವೇಶನಗಳು ಮುಕ್ತಾಯವಾಗುವ ಮೊದಲು ವಿಧಾನ ಮಂಡಲದ ಉಭಯ ಸದನಗಳು ಆ ಅಧಿಸೂಚನೆಯಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಒಪ್ಪಿದರೆ ಅಥವಾ ಅಧಿಸೂಚನೆಯನ್ನು ಮಾಡಬಾರದೆಂದು ತೀರ್ಮಾನಿಸಿದರೆ ಆ ತರುವಾಯ ಅಂಥ ಅಧಿಸೂಚನೆಯು ಸಂದರ್ಭಾನುಸಾರ ಅಂಥ ಮಾರ್ಪಾಟಾದ ರೀತಿಯಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಸಂದರ್ಭಾನುಸಾರ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ ಅಂಥ ಮಾರ್ಪಾಟು ಅಥವಾ ರದ್ದತಿಯು ಆ ಅಧಿಸೂಚನೆಯ ಅಡಿಯಲ್ಲಿ ಈ ಹಿಂದೆ ಮಾಡಲಾದ ಯಾವುದರ ಮಾನ್ಯತೆಗೂ ಪ್ರತಿಕೂಲವಾಗಿರತಕ್ಕದ್ದಲ್ಲ.

**ಹೆಚ್. ಆರ್. ಭಾರದ್ವಾಜ್**
**ಕರ್ನಾಟಕ ರಾಜ್ಯಪಾಲರು**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

## KARNATAKA ORDINANCE NO. 01 OF 2011

## THE KARNATAKA JANAPADA VISHWAVIDYALAYA ORDINANCE, 2011

(Promulgated by the Governor of Karnataka in the Sixty Second year of the Republic of India and First published in the Karnataka Gazette Extra-ordinary on the Twenty Second day of July 2011)

An Ordinance to provide for the establishment and incorporation of the Karnataka Janapada Vishwavidayalaya.

Whereas both houses of the State Legislature are not in session and the Governor of Karnataka is satisfied that circumstances exist which render it necessary for him to take immediate action to establish a University of unitary and residential nature exclusively for furthering the advancement of learning folklore and prosecution of research;

Now, therefore in exercise of the powers conferred by clause (1) of Article 213 of the constitution of India, the Governor of Karnataka is pleased to promulgate the following Ordinance, namely:-

### CHAPTER - I

### PRELIMINARY

**1. Short title and commencement.-** (1) This Ordinance may be called the Karnataka Janapada Vishwavidyalaya Ordinance, 2011.

(2) It shall come into force on such date as the State Government may, by notification, appoint.

**2. Definitions.-** In this Ordinance, unless the context otherwise requires,-

(i) "Academic Council" means the Academic Council established under section 27;

(ii) "Appointed date" means the date appointed for the commencement of this Ordinance;

(iii) "Department", "Department of Studies", "Post Graduate Department" means the Department, Department of Studies, Post Graduate Department in the University run and maintained by the University;

(iv) "Government" means the State Government;

(v) "Hostel" means a unit of residence for the students of the University maintained or recognised by the University in accordance with the provisions of this Ordinance;

(vi) "Janapada" means the folklore and includes all forms of folklore of the people whose culture is handed down orally;

(vii) Prescribed" means prescribed by the statutes;

(viii) "Statutes" means the statutes made under this Ordinance;

(ix) "Syndicate" means the Syndicate established under section 24;

(x) "Teachers" means Assistant Professors, Associate Professor, Professors, emeritus Professors and other like persons as may be declared by the statutes to be teachers;

(xi) "University" means the Karnataka Janapada Vishwavidyalaya established under section 3;

(xii) "University Grants Commission" means the Commission established under section 4 of the University Grants Commission Act, 1956 (Central Act 3 of 1956);

(xiii) "University Library" means a Library maintained by the University, whether instituted by it or not;

## CHAPTER - II

## THE UNIVERSITY

**3. Establishment of the University.-** (1) For furthering the advancement of learning and prosecution of research in folklore there shall be established a University by the name called "The Karnataka Janapada Vishwavidyalaya".

(2) The University shall be a body corporate and shall have perpetual succession and a common seal and shall sue and be sued by the said name.

(3) The University shall be of the unitary and residential nature.

(4) No institution affiliated to, or associated with, or maintained by any other University in the State shall be recognised by the University for any purpose, except with the prior approval of the Government and the concerned University.

(5) The headquarters of the University shall be located within the limits of ten kilometers of Gotagodi area of Shiggavi Taluk of Haveri district.

(6) The University shall have the power to open the regional centres at suitable places in other parts of the State.

**4. Objectives of the Folklore University.-** The Folklore University shall have the following objects, namely:-

(1) to provide for higher education and research in all the subjects of folklore, literature, art, music, theatre, handicrafts, folk medicine, food, beverage, cottage industries etc., of Karnataka;

(2) to provide opportunity for study of the culture of Kannada speaking and other Dravidian languages speaking people and culture of the people speaking other languages;

(3) to provide for the study heritage of the indigenous/traditional knowledge with the awareness that "Indigenous culture is not monolithic but redemptively pluralistic;"

(4) to assist for the development of all neglected rural communities and tribes of Karnataka;

(5) to strengthen the indigenous culture to face the challenges of globalization effectively;

(6) this being the first folklore university in the world, it has to be promoted as a model university to all the countries particularly to the developing countries;

(7) to collect, compile and publish the folklore of all the communities of different areas in Karnataka scientifically through extensive field work;

(8) to preserve the collected folklore materials through multimedia documentation in the systematic manner in digital form;

(9) to collect the available materials used in the rural and tribal life in the different areas of Karnataka before they disappear and to exhibit them systematically in the indoor and outdoor exhibitions and to make those places attractive tourist spots;

(10) to introduce folklore as one of the subject of learning at schools, colleges and higher education centres and also to provide for research at the University level and to confer degrees. To educate interested people through distance education;

(11) to study folklore on multidisciplinary and interdisciplinary base and to promote research at higher levels;

(12) to make comparative study of folklore of different languages and communities of Karnataka;

(13) to encourage comparative study of Karnataka folklore alongwith folklore of other States of India. Similarly to encourage the study of folklore of South Asia and other nations of the world, particularly, folklore of developing countries. To implement these objects to enter into agreement with other University/research centres of the State of Karnataka, India and the world;

(14) to facilitate translations of Karnataka folklore and significant folklore studies into English, Hindi and other Indian and foreign languages. And also to translate folklore texts and significant folklore studies available in other Indian languages and languages of the world into Kannada;

(15) to establish Prasaranga for publication of diversities of folklore by the University. To publish books, news papers, research papers and other publications through the Prasaranga. To propagate the folklore art and culture through multi media. To arrange public lecture by scholars and artists to create awareness among the general public regarding folklore;

(16) to make efforts, for promoting the cottage industries and professional skills, providing self-dependence and self employment;

(17) to provide financial security and facilitating markets for products of traditional crafts;

(18) to impart essential education aimed at healthy and harmonious society by eradicating impertinent, unreasonable, inhuman and unscientific factors that may exist in the folklore;

(19) to create self confidence among the neglected communities by bringing them into the main stream of the society through modern education. To establish a separate developing faculty for the purpose of maximum utilization of folklore in informal education, mass communication and rural development activities;

(20) to formulate schemes related to the study of folklore and its implementation from time to time.

**5. Powers of the University.-** The University shall have the following powers, namely:-

(1) to arrange for conferring degrees, diploma and other academic distinctions;

(2) to confer degrees, diploma and other academic distinctions on persons who shall have carried out research in any other institution or centre recognised by the University subject to such conditions as may be prescribed;

(3) to confer honorary degrees or other academic distinctions in such manner and subject to such conditions as may be prescribed;

(4) to supervise and control hostels and to regulate and enforce discipline among the students of the University and to make arrangements for promoting their health and general welfare;

(5) to prescribe conditions under which the award of any degree, diploma and other academic distinctions to persons may be withheld;

(6) to co-operate with any other university, authority or association or any other public or private body having in view the promotion of purposes and objects similar to those of the University for such purposes as may be agreed upon, on such terms and conditions, as may, from time to time, be prescribed;

(7) to establish and maintain University libraries, research stations, museums for research and publication bureau;

(8) to institute and award fellowships, including travelling fellowships, scholarships, medals and prizes in the manner prescribed;

(9) to establish, maintain or recognise hostels for students of the University and residential accommodation for the staff of University and to withdraw any such recognitions;

(10) to fix fees and to demand and receive such fees as may be prescribed and to hold and manage endowments and other properties and funds of the University;

(11) to borrow money with the approval of the Government on the security of the property of the University for the purpose of the University;

(12) to enter into agreement with other bodies or persons for the purpose of promoting the objectives of the University including the assuming of the management of any institution under them and the taking over of the rights and liabilities;

(13) to acquire and hold both movable and immovable property and to rent out any immovable properties acquired by it for the purposes of the university, or to sale or otherwise, to transfer any movable property and to make agreement and to do all other functions necessary for the purposes of this Ordinance;

(14) any immovable property which is vested in the University or acquired by it, shall not be given on rent, sale or otherwise transfer without the prior approval by the Government.

**6. Admission to the University.-** (1) The University shall subject to the provisions of this Ordinance and the statutes, be open to all persons.

(2) Nothing contained in sub-section (1), shall require the University,-

(a) to admit to any course of study any person who does not possess the prescribed academic qualification or standard;

(b) to retain on the rolls of the University any student whose academic record is below the minimum standard required for the award of a degree, diploma or other academic distinction; or

(c) to admit any person or retain any student whose conduct is prejudicial to the interests of the University or the rights and privileges of other students and teachers.

**7. Power to issue directions.-** The Chancellor may either suo motu or on the recommendation of the Government issue such directions as may be necessary or expedient in the interest of both administration and academic functioning of the University and in particular to ensure peace and tranquility and to protect the property and finances.

**8. Power to annul the orders of the University.-** The Government may by order published in the Official Gazette annul any order, notification, resolution or any proceedings of the University which in its opinion is not in conformity with the provisions of this Ordinance, or the Statutes, Regulations, or Ordinances or is otherwise inconsistent with the policy of the Government.

## CHAPTER - III

## OFFICERS OF THE UNIVERSITY

**9. Officers of the University.-** The following shall be the officers of the University, namely:-

(1) The Chancellor;

(2) The Pro-Chancellor;

(3) The Vice Chancellor;

(4) The Registrar;

(5) The Registrar (Evaluation);

(6) The Finance Officer;

(7) Deans of Faculties;

(8) The Directors, Academic, Planning, Monitoring and Evaluation Board;

(9) Such other officers of the University as may be declared by the Statutes to be the officers of the University.

**10. The Chancellor.-** (1) The Governor of Karnataka shall be the Chancellor of the University. He shall by virtue of his office be the head of the University and shall when present, preside at any convocation of the University and confer degrees, diploma or other academic distinctions upon persons entitled to receive them.

(2) Where power is conferred upon the Chancellor to nominate persons to the authorities, the Chancellor shall to the extent necessary, nominate persons to represent interests not otherwise adequately represented.

(3) The Chancellor may on his own motion or on application call for and examine the record of any officer or authority of the University in respect of any proceedings to satisfy himself as to the regularity of such proceedings or the correctness, legality or propriety of any decision taken or order passed therein; and, if, in any case it appears to the Chancellor that any such decision or orders shall be modified, annulled, revised or remitted for reconsideration, he may pass orders accordingly:

Provided that every application to the Chancellor for the exercise of the powers under this section shall be preferred within three months from the date on which the proceedings, decision or order to which the application relates was communicated to the applicant:

Provided further that no order prejudicial to any person shall be passed unless such person has been given an opportunity of making his representation.

**11. Inspection.-** (1) The Chancellor shall have the right to cause an inspection or inquiry to be made, by such person or persons as he may direct, of the University, its buildings, University libraries, museums and equipments, and of any institutions maintained or recognised by the University and also of the research, teaching and other work conducted or done by the University, and to cause an inquiry to be made in respect of any matter connected with the University. The Chancellor shall in every case give notice to the University of his intention to cause such inspection or inquiry to be made and the University shall be entitled to be represented thereat.

(2) The Chancellor shall communicate to the Syndicate of his views with reference to the results of such inspection or inquiry and may after ascertaining the opinion of the Syndicate thereon advice the University upon the action to be taken and fix a time limit for taking such action.

(3) The Syndicate shall report to the Chancellor the action, if any, which is proposed to be taken or has been taken upon the results of such inspection or inquiry. Such report shall be submitted within such time as the Chancellor may direct.

(4) Where the Syndicate does not take action to the satisfaction of the Chancellor within the time limit as may be fixed under sub-section (2), the Chancellor may, after considering any explanation furnished or representation made by the Syndicate, issue such directions as he may think fit and the Syndicate shall comply with such directions. In the event of the Syndicate not complying with such directions by the Chancellor, the Chancellor shall have power to appoint any person or body to comply with such directions and make such orders as may be necessary for the expenses thereof.

(5) The Chancellor shall exercise such other powers and perform such other duties as may be conferred on him by or under this Ordinance.

**12. The Pro-Chancellor.-** (1) The Minister in charge of the Higher Education in the State of Karnataka shall be the Pro-Chancellor of the University.

(2) He shall preside over any convocations in the absence of the Chancellor.

**13. The Vice-Chancellor.-** (1) The Vice-Chancellor shall be a whole time officer of the University.

(2) The Government shall constitute a Search Committee consisting of four persons of whom one shall be nominated by the Chancellor, one by Government, one by the University Grants commission and one by the Syndicate. The Government shall appoint one among the four members as to function as the Chairman of the Committee. The Secretary to Government, in charge of the Higher Education Department, or his nominee not below the rank of the Deputy Secretary to Government shall be the convener of the Search Committee.

(3) No person connected with the affairs of the Government, the University or any college or institution affiliated to the University shall be nominated as the member of the Search Committee.

(4) The Search Committee shall submit to the Government a panel of three eminent persons in the field of folklore in the alphabetical order. The Government shall forward the panel, along with its recommendations, to the Chancellor who shall keeping in view merit, equity and social justice appoint one person from the panel as the Vice Chancellor:

Provided that the Chancellor may with the concurrence of the Government call for a second panel if he considers it necessary and the Search Committee shall submit a second panel which shall be final.

(5) No person shall be appointed or hold office of the Vice-Chancellor, if he has attained the age of sixty seven years.

(6) The Vice-Chancellor shall, subject to the pleasure of the Chancellor and the provisions of sub-section (5) hold the office for a period of four years. He shall not be eligible for reappointment, for a second term.

(7) The Vice-Chancellor shall not be removed from his office except by an order of the Chancellor passed on the ground of willful omission or refusal to carry out the provisions of this Ordinance or for abuse of the powers vested in him and on the advice tendered by the Government on consideration of the report of an inquiry ordered by it, under sub-section (8).

(8) For the purposes of holding an inquiry under this section the Government shall appoint a person who is or has been a Judge of the High Court or the Supreme Court. The inquiry authority shall hold the inquiry after giving an opportunity to make representation by the Vice-Chancellor and shall submit a report to the Government on the action to be taken including penalty, if any, to be imposed, and the Government shall on consideration of the report advise the Chancellor. The Chancellor shall act in accordance with such advice, as far as may be, within six months.

(9) The emoluments and other conditions of service of the Vice-Chancellor shall be such as may be determined by the Chancellor and shall not be varied to his dis-advantage after his appointment as Vice-Chancellor. In the event of a Vice-Chancellor retiring on superannuation during his tenureship as Vice-Chancellor, his conditions of service already determined shall continue to be in vogue. All his pensionary benefits shall be kept in abeyance which shall be released after his demitting the office of the Vice-Chancellor.

(10) If a retired person is appointed as Vice-Chancellor, the terms and conditions of service upon his appointment as Vice-Chancellor including emoluments shall be determined by the Chancellor. The emoluments shall be reduced by the amount of pension and allowances drawn by him.

**14. Powers of the Vice-Chancellor.-** (1) The Vice-Chancellor shall be the principal executive and academic officer of the University and shall exercise general control over the affairs of the University. He shall exercise all powers necessary for maintenance of discipline in the University.

(2) He shall be ex-officio Chairman of the Academic Council and the Syndicate and the Finance Committee. He shall preside over in the absence of the Chancellor and Pro-Chancellor, at the convocations. He shall preside over the meetings of the authorities or bodies of the Universities, and shall be entitled to vote.

(3) He shall ensure that all the provisions of this Ordinance, the Statutes, the Ordinances, and the Regulations are observed and shall have all the powers necessary for that purpose.

(4) He may either himself or through any officer of the University authorised in writing by him, convene the meetings of the Academic Council, the Syndicate and the Finance Committee and shall perform all such acts as may be necessary to carry out and give effect to the decisions of these authorities.

(5) In case of emergency which, in his opinion, requires immediate action, the Vice-Chancellor shall take such action as he deems necessary and shall at the earliest opportunity thereafter report the action taken to such authority or body which in the ordinary course would have dealt with the matter:

Provided that, if the action taken by the Vice-Chancellor is not approved by the Authority or body concerned, he may refer the matter to the Chancellor through the Government, whose decision thereon shall be final:

Provided further that any person in the service of the University affected by the decision of the Authority or body based on the report of the Vice-Chancellor under this sub-section, may prefer an appeal to the Chancellor within thirty days from the date on which the decision was communicated to him and the decision of the Chancellor on such appeal shall be final:

Provided also that the power vested under this sub-section, shall not be exercised to revise the pay scale of University employees or to grant affiliation to an institution or a course of instruction and if in the exercise of the powers under this sub-section Statutes or Regulations are framed, they shall be subject to the approval of the Chancellor under the relevant provisions of this Ordinance and if Ordinances are made they shall be submitted to the Chancellor in accordance with this Ordinance.

(6) The Vice-Chancellor shall exercise such other powers as may be prescribed by the Statutes, Ordinances and Regulations.

**15. Arrangement of work during vacancy in the office of the Vice-Chancellor.-** (1) During the temporary absence of the Vice-Chancellor by reason of leave, illness or any other cause, the Chancellor may make such arrangements as he deems fit for carrying on the duties of the Vice-Chancellor:

Provided that, pending making of such arrangements by the Chancellor, the Vice-Chancellor may designate the senior most Dean available in the University to be incharge of the current duties of the Vice-Chancellor for a period not exceeding one month or till arrangements are made by the Chancellor, whichever is earlier.

(2) During the period when a vacancy in the office of the Vice-Chancellor remains unfilled, the Chancellor may appoint the senior most Dean available in the University to act as Vice-Chancellor, and the person so appointed shall have all the powers and shall be entitled to all the privileges of the Vice-Chancellor and to such emoluments and allowances as may be determined by the Chancellor in accordance with the Statutes, if any, framed in this behalf.

**16. Registrar.-** (1) The Registrar shall be a whole time officer of the University. The Government may appoint an officer not below the rank of Group 'A' senior scale of Government or a senior most Professor who has served atleast five years as Professor in any faculty of the University to be the Registrar of a University.

(2) The Registrar shall be an ex-officio Member-Secretary of the Academic Council and the Syndicate and member of the Finance Committee.

(3) It shall be the duty of the Registrar,-

(a) to be the custodian of the records, the common seal and such other property of the University as the Vice-Chancellor, or the Syndicate shall commit to his charge;

(b) to issue notices convening the meetings of the Syndicate, Academic Council or the Faculties, the Board of Studies, and of any authority of the University and to keep minutes of all such meetings;

(c) to conduct the official correspondence of the authorities of which he shall be the Member-Secretary;

(d) to supply to the Chancellor and to the Government copies of the agenda of the meetings of the authorities of the University as soon as they are issued and the minutes of the meeting within a month of holding of the meeting.

(4) The Registrar shall exercise such other powers and perform such other duties as may be prescribed by the Statutes, Ordinances or Regulations and as may be allocated to him from time to time by the Vice-Chancellor.

(5) The Registrar may be assisted by one or more Deputy Registrars and Assistant Registrars.

(6) The pleadings of all the suits and legal proceedings instituted by or against the University shall be signed and verified by the Registrar and all the orders of such suits and proceedings shall be given to the Registrar and shall be served to them.

**17. The Registrar (Evaluation).-** (1) The Registrar (Evaluation) shall be a whole time officer of the University. The Government may appoint a senior member of faculty of any University to be the Registrar (Evaluation) of a University:

Provided that where no such person is available to appoint as the Registrar (Evaluation), then the Vice Chancellor with the approval of the Syndicate from out of a panel of not less than three persons recommended by the Vice-Chancellor shall appoint the Registrar (Evaluation). If none of the persons in the panel is approved by the Syndicate within the time prescribed by the Statutes, the Government may, in consultation with the Vice Chancellor appoint such other person as he deems fit to be the Registrar (Evaluation). The terms and conditions of service and emoluments of the Registrar (Evaluation) so appointed shall be such as may be determined by the Government.

(2) The Registrar (Evaluation) shall be a Member of the Syndicate, the Academic Council, Finance Committee and all other faculties.

(3) The Registrar (Evaluation) shall be incharge of the conduct of examinations and all other matters incidental thereto and ancillary therewith and shall perform such other duties as may be prescribed by the Statutes or Ordinances, or as may be allocated to him by the Vice-Chancellor.

(4) The Registrar (Evaluation) may be assisted by one or more Deputy Registrars (Evaluation) and Assistant Registrars (Evaluation).

**18. The Finance Officer.-** (1) The Finance Officer shall be a whole time officer of the University, appointed by the Government with the approval of the Syndicate from out of a panel of not less than three persons being officers in the cadre of Joint Controller of State Accounts Department or an officer of the Rank of Deputy Accountant General having

